


# ಹಿಂಗಾರ



ಅರೆಬಾಸೆ ತ್ರೈಮಾಸಿಕ

ಸಂಪುಟ : 4 ಸಂಚಿಕೆ : 5 ದಿನಾಂಕ : 31-12-2020 ಬೆಲೆ : ರೂ. 20

ಅಕ್ಟೋಬರ್-ನವೆಂಬರ್-ಡಿಸೆಂಬರ್ 2020







ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ



ಮಡಿಕೇರಿಲಿ ನಡ್ದ ಅರೆಬಾಸೆ ನಿಘಂಟು ತರಬೇತಿ ಕಾರ್ಯಗಾರದ
ಮುಖ್ಯ ನೆಂಟ್ರು ನಾಗೇಶ್ ಕಾಲೂರುವು ಮಾತನಾಡ್ದು




ಸುಳ್ಯದ ರಂಗಮನೆ ಸಾಂಸ್ಕೃತಿಕ ಕಲಾಕೇಂದ್ರಲಿ ಸಾಹೇಬ್ರು ಬಂದವೇ
ಅರೆಬಾಸೆ ನಾಟಕದ ಉದ್ಘಾಟನಾ ಜಂಭರ




ಮಡಿಕೇರಿಲಿ ನಡ್ದ ಅರೆಬಾಸೆ ದಿನಾಚರಣೆ ಮತ್ತೆ ಪಂಚವಟಿ ಅರೆಬಾಸೆ ಯಕ್ಷಗಾನ ತಾಳಮದ್ದಳೆನ ಉದ್ಘಾಟನಾ ಜಂಭರ




ಕರ್ನಾಟಕ ಸರ್ಕಾರ
ಕನ್ನಡ ಮತ್ತು ಸಂಸ್ಕೃತಿ ಇಲಾಖೆ



ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ
ಮಡಿಕೇರಿ

# ಹಿಂಗಾರ

ಅರೆಭಾಷೆ ತ್ರೈಮಾಸಿಕ

ಸಂಪುಟ : 4 ಸಂಚಿಕೆ : 5

ದಿನಾಂಕ : 31-12-2020 ಕೊಡಗು ರೂ. 20

ಪ್ರಧಾನ ಸಂಪಾದಕರ್
ಲಕ್ಷ್ಮೀನಾರಾಯಣ ಕಜೆಗದ್ದೆ

ಸಂಪಾದಕರ್
ಡಾ. ದಯಾನಂದ ಕೂಡಕಂಡಿ

ಸಹಸಂಪಾದಕರ್
ಪುರುಷೋತ್ತಮ ಕಿರ್ಲಾಯ

| | |
|---|---|
| **HINGARA** | ಹಿಂಗಾರ |
| A Quarterly Magazine | ತ್ರೈಮಾಸಿಕ ಪತ್ರಿಕೆ |
| Published by | ಪ್ರಕಾಶಕರು |
| **Karnataka Arebhase Samskruthi Mathu Sahitya Academy** | **ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ** |
| Coffee Krip, 1st Floor | ಕಾಫಿ ಕೃಪಾ, ಒಂದನೇ ಮಹಡಿ, |
| Rajaseat Rd, Madikeri - 571 201 | ರಾಜಸೀಟ್ ರಸ್ತೆ, ಮಡಿಕೇರಿ–571201 |
| Ph : 08272-223055 | ದೂರವಾಣಿ : 08272–223055 |
| arebaseacademy@gmail.ocm | arebaseacademy@gmail.ocm |
| www.arebaseacademy.com | www.arebaseacademy.com |
| Chief Editor | ಪ್ರಧಾನ ಸಂಪಾದಕರ್ |
| **Lakshminarayana Kajegadhe** | **ಲಕ್ಷ್ಮಿನಾರಾಯಣ ಕಜೆಗದ್ದೆ** |
| Editor | ಸಂಪಾದಕರ್ |
| **Dr. Dayananda Kudakandi** | **ಡಾ. ದಯಾನಂದ ಕೂಡಕಂಡಿ** |
| Managing Editor | ವ್ಯವಸ್ಥಾಪಕ ಸಂಪಾದಕರ್ |
| **Chinnaswamy** | **ಚಿನ್ನಸ್ವಾಮಿ** |
| Cover Page Photo | ಮುಖಪುಟ ಚಿತ್ರ |
| **Bharathesha Alasandemajalu** | **ಭರತೇಶ ಅಲಸಂಡೆಮಜಲು** |
| Printed at | ಮುದ್ರಣ |
| **Aakrithi Prints** | **ಆಕೃತಿ ಪ್ರಿಂಟ್ಸ್** |
| Mangaluru | ಮಂಗಳೂರು |
| Ph. 0824-2972002 | ದೂರವಾಣಿ : 0824–2972002 |
| Pages : 80 | ಪುಟಗಳು : 80 |
| Copis : 1500 | ಪ್ರತಿಗಳು : 1500 |
| Vol : 4 - 5 | ಸಂಪುಟ 4 ಸಂಚಿಕೆ 5 |
| Period : October to December | ಅಕ್ಟೋಬರ್ – ಡಿಸೆಂಬರ್ |
| Price : Rs. 20 | ಬೆಲೆ : ರೂ. 20/– |
| 3 year subscription : | ತ್ರೈವಾರ್ಷಿಕ ಚಂದಾ : |
| Rs. 200 | ರೂ. 200 |



# ಅಧ್ಯಕ್ಷರ ಮಾತ್

ಎಲ್ಲವುಕೆ ನಮಸ್ಕಾರ,

ಎಲ್ಲವುಕೆ ಗೊತ್ತಿರುವಾಂಗೆ ನಮ್ಮೆಲ್ಲರ ಬಹು ನಿರೀಕ್ಷೆಯ ನಾಟಕ 'ಸಾಹೇಬ್ರು ಬಂದವೇ!' ಇನ್ನೇನು ಸಾರ್ವಜನಿಕವಾಗಿ ಪ್ರದರ್ಶನ ಕಾಂಬವ ಹೊತ್ತುಲಿ ಮಹಾ ಮಾರಿ ಕೊರೋನಾ ಬಂದ್ ನಮ್ಮ ಎಲ್ಲ ಕ್ರಿಯಾಶೀಲ ಕೆಲ್ಸಗಳ್ನ ಬದಿಗೆ ಇಸುವಂಗೆ ಮಾಡಿ ಹಾಕಿತ್. ಒಂದ್ ಆರ್ ತಿಂಗ ಸಭೆ ಸಮಾರಂಭಗಳ್ನ ನಡ್ಸಿಕಾಗದಂತ ಪರಿಸ್ಥಿತಿ. ವಾತಾವರಣ ಸಾಮಾನ್ಯ ಸ್ಥಿತಿಗೆ ಬಾತ್‌ಂತ ಹೇಳಿಕಾಕನ ಮತ್ತೆ ನಾವು ನಾಟಕ ತಯಾರಿಗೆ ಶುರು ಹಚ್ಚಿಕೊಂಡೊ. ಆದರೆ ಇದರೊಟ್ಟಿಗೆ ನಮಗೆ ಅನೇಕ ಅಡೆ ತಡೆಗ ಕೂಡ ಬಂದೊ, ನಮ್ಮ ನಾಟಕ ತಂಡದ ಕಲಾವಿದರು ರಾಜ್ಯದ ಬೇರೆ ಬೇರೆ ಊರುಗಳ್‌ಂದ ಬಂದವು. ಆದರೆ ಲಾಕ್ ಡೌನ್ ಹಿನ್ನಲೆಲಿ ಅವರವರ ಊರಿಗೆ ಹೋದ ಕೆಲ ಕಲಾವಿದರಿಗೆ ಅನಿವಾರ್ಯ ಕಾರಣಗಳ್‌ಂದ ಮತ್ತೆ ನಾಟಕಲಿ ತೊಡಗಿಸಿಕಣಿಕೆ ಸಾಧ್ಯ ಆತ್ಲೆ. ಕಲಾವಿದರ ಕೊರತೆಂದ ನಾವ್‌ಗೆ ಬಾಳ ಕಸ್ಟ ಆತ್. ಮತ್ತೆ ಹುಡುಕಾಟ ಸುರು ಆತ್. ಕಡೆಗೆ ಕಾಲೇಜಿಗೆ ಹೋಗಿ ಅಲ್ಲಿಂದ ಕಲಾ ಪ್ರತಿಭೆಗಳ್ನ ಆಯ್ಕೆ ಮಾಡ್ದೊ. ಇನ್ನ್ ಅವಿಕೆ ಸುರುಂದ ತರಭೇತು ಕೊಡುವ ದೊಡ್ಡ ಸವಾಲು ನಿರ್ದೇಶಕ ಜೀವನ್ ರಾಂ ನವರ ಮೇಲೆ ಬಿತ್ತು. ಮತ್ತೆ ಹಠಕಟ್ಟಿ ತಯಾರಿ ಸಾಗಿತ್. ಕೇವಲ ಒಂದು ತಿಂಗಳ ಸಣ್ಣ ಸಮಯಲಿ ಹೊಸಬರ್ನ ತಯಾರಿ ಮಾಡ್ದ ದೊಡ್ಡ ಗೆಲು ಜೀವನ್ ರಾಂ ಅವ್ಕೆ ಸಲ್ಲೊಕು. ಇದರ ಪಲಂದ ಡಿಸೆಂಬರ್ 2 ಮತ್ತೆ 4, ಸುಳ್ಯಲಿ ಪ್ರದರ್ಶನ ಕಂಡತ್. ತುಂಬಿದ ಸಭಾಂಗಣ ನೋಡಿಕಾಕನ ನಮ್ಮ ಸ್ರಮ ಸಾರ್ಥಕ ಅನ್ನಿಸಿತ್. ಜನವರಿ 1–17ರ ತನಕ ಮತ್ತೆ ನಮ್ಮ ರಂಗ ಪಯಣದ ನಡೆ ರಾಜ್ಯದ ಬೇರೆ ಬೇರೆ ಬಾಗಗಳ್ಲಿ ಸಾಗಿ ಜನರ ಮೆಚ್ಚುಗೆಗೆ ಪಾತ್ರ ಆತ್. ಹಂಗೇ ಡಿಸೆಂಬರ್ 15,2011 ಅಕಾಡೆಮಿ ಸ್ಥಾಪನೆ ಆದ ದಿನ. ಹಂಗಾಗಿ ಅರೆಬಾಸೆ ಸಮಾಜದ ಎಲ್ಲ ಮುಖಂಡರ ಜೊತೆ ಕುದ್ದು ಸಮಾಲೋಚನೆ

ನಡ್ಸಿ, ಆ ದಿನನ ಅರೆಬಾಸೆ ದಿನಾಚರಣೆ ದಿನಂನ್ನಾಗಿ ಮಾಡೊಮೋಂತೇಳಿ ನಿರ್ಣಯ ತಕಂಡು ಅ ದಿನ ಮಡಿಕೇರಿಲಿ ಅರೆಬಾಸೆ ತಾಳಮದ್ದಳೆ ಮಾಡುದ್ರ ಮೂಲಕ ಆಚರಿಸಿದೋ. ಅದೇ ದಿನ ಬೆಂಗಳೂರು, ಮೈಸೂರು, ಕೊಡಗು, ಮಂಗಳೂರ್ನ ಕೆಲವು ಜಾಗೆಲಿ ಅರೆಬಾಸೆ ಸಂಘ ಸಂಸ್ಥೆಗ ಕೂಡ ಅರೆಬಾಸೆ ದಿನಾಚರಣೆ ಮಾಡುದರ ಮೂಲಕ ಅರೆಬಾಸೆ ದಿನಾಚರಣೆ ಬಾರೀ ಸಂಭ್ರಮಲಿ ನಡ್ತ್. ಅರೆಬಾಸೆಲಿ ನಾಟಕ, ಅರೆಬಾಸೆಲಿ ತಾಳಮದ್ದಳೆ ಮಾಡ್ವ ಮೂಲಕ ಬಾಸೆ, ಸಂಸ್ಕೃತಿ ಬೆಳೆವ ಕಡೆಗೆ ಹೊಸ ಪ್ರಯತ್ನಕ್ಕೆ ಕೈ ಹಾಕಿದ ಒಂದು ಸಮಾಧಾನ ನಾವ್‌ಗೆ. ಒಂದು ಬಾಸೆ ಉಳಿಯೊಕು, ಬೆಳಿಯೋಕುತಾದರೆ ಅಲ್ಲಿ ಕಲೆ ಸಂಸ್ಕೃತಿಗೆ ಕೂಡ ಜಾಗೆ ಇರೋಕು. ಈ ದಿಸೆಲಿ ಬೇರೆ ಬೇರೆ ಯೋಜನೆಗ ಮತ್ತೆ ಯೋಚನೆಗ ನಮ್ಮ ಮುಂದೆ ಉಟ್ಟು. ನಿಮ್ಮೆಲ್ಲರ ಸಹಕಾರದಿಂದಷ್ಟೇ ಅದನ್ನ ಪೂರ್ಣಗೊಳಿಸಿಕೆ ಸಾಧ್ಯ. ಯಾಗೋಳ್ನಾಂಗೆ ಹಿಂಗಾರ ಸಂಚಿಕೆ ನಿಮ್ಮ ಎದುರು ಉಟ್ಟು. ಓದಿ, ಅಬಿಪ್ರಾಯ ತಿಳಿಸಿ.

ನಮಸ್ಕಾರಗ

**ಲಕ್ಷ್ಮೀನಾರಾಯಣ ಕಜೆಗದ್ದೆ**



# ಸಂಪಾದಕರ ಮಾತ್

ಅರೆಬಾಸೆನ ಹಿಂಗಾರ ತ್ರೈಮಾಸಿಕ ಪುಸ್ತಕನ ಓದ್‌ವ ಪ್ರೀತಿಯ ಎಲ್ಲ ಅರೆಬಾಸೆ ಓದ್‌ಗರಿಗೆ ನಮಸ್ಕಾರಗ. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿಂದ ಹೊರತರ್‌ತ್ತಿರ್‌ವ ಹಿಂಗಾರ ತ್ರೈಮಾಸಿಕನ ಚಂದಾದಾರ್‍ರಾಗಿ, ನಿರಂತರಾಗಿ ಓದಿಕಂಡ್ ಮೌಲ್ಯದ ಬರಹಗಳ್ನ ಮತ್ತೆ ಒಳ್ಳ ಸಲಹೆಗಳ್ನ ಕೊಟ್ಟ್ ಸಹಕರಿಸ್ತಿರುವ ನಿಮಿಗೆ ನಮಸ್ಕರಿಸಿನೆ.

ಈ ಹಿಂಗಾರ ತ್ರೈಮಾಸಿಕ ಪುಸ್ತಕ ನಾಲ್ಕನೆ ಸುಂಪುಟದ ನಾಲ್ಕನೆ ಸಂಚಿಕೆ. ಈ ಸಂಚಿಕೆಲಿ 2020ರ ಅಕ್ಟೋಬರ್‌ಂದ ಡಿಸಂಬರ್ ತಿಂಗಳ್ನವರೆಗಿನ ಸಂಗತಿಗಳ್ನ ಸಂಕಲಿಸ್ಯೊಳೊ. ಈ ಸಂಚಿಕೆ ಡಿಸಂಬರ್ ತಿಂಗಳ್‌ಲಿ ಪ್ರಕಟ ಆಕಾಗಿತ್. ಆದ್ರೆ ಕೆಲವೊಂದ್ ಕಾರಣಂದ ಸಂಚಿಕೆನ ಸರಿಯಾದ ಸಮಯಕ್ಕೆ ಹೊರತಾಕೆ ಆತ್ಲೆ. ಅದಕ್ಕಾಗಿ ಚಂದಾದರರ್, ಓದ್‌ಗರ್ ಮತ್ತೆ ಬರಹಗಾರರ್ಲಿ ಕ್ಷಮೆ ಕೇಳ್ತೊಳೆ. ಇನ್ನ್ ಸರಿಯಾದ ಸಮಯಲಿ ತ್ರೈಮಾಸಿಕನ ಪ್ರಕಟಿಸಿ ನಿಮ್ಮ ಕೈಗೆ ಸಿಗುವಂಗೆ ಪ್ರಯತ್ನ ಪಟ್ಟವೆಂತ ಭರವಸೆ ಕೊಟ್ಟನೆ.

ಈ ಸಂಚಿಕೆಲಿ ಕರ್ನಾಟಕ ಕಲಾಶ್ರೀ ಬೈಲೆ ಮನೆ ಸಹನಾ ಚಂದನ್‌ರ ಪರಿಚಯನ ತೆಕ್ಕಡೆ ಬಿ ಕುಮಾರಸ್ವಾಮಿನವು ಮಾಡ್ಯೊಳೊ. ಸಂಸ್ಕೃತಿ ದರ್ಪಣಲಿ ಡಾ.ಲಾವಣ್ಯ ಕೊಟ್ಟಕೇರಿಯನವು ಅರೆಬಾಸೆನ ಕೂಸುನ ಬಾಸೆ (ಬಾಲ ಬಾಸೆ)ನ ಬಾರಿ ಲಾಯ್ಕಲಿ ತಿಳ್‌ಸಿಯೊಳೊ. ಅನುಭವ ವಿಭಾಗಲಿ ಪಿ.ಜಿ. ಅಂಬೆಕಲ್ಲುವು ಮೋರೆ ಮುಚ್ಚಿಕಂಡ್ ಓಡಾಡುವಂಗೆ ಆತಲೇಂತೇಳುವ ಅನುಭವನ ಹಂಚಿಕೊಂಡೊಳೊ. ಆರೋಗ್ಯ ದರ್ಪಣಲಿ ಡಾ. ನಿವೇದಿತಾ ಎ.ಪಿ.ವು ರೋಗ ನಿರೋಧಕ ಶಕ್ತಿ ಹೆಚ್ಚಿಸುದು ಹೇಂಗೆಂತೇಳುವ ಬಗ್ಗೆ ಬಾರಿ ಲಾಯ್ಕಲಿ ತಿಳಿಸ್ಯೊಳೊ. ವೈಚಾರಿಕ ವಿಭಾಗಲಿ ಕೊಟ್ಟಕೇರಿಯನ ಲೀಲಾದಯಾನಂದನವು ಕೋವಿಡ್ ಹತ್ತೊಂಬತ್ತರೊಟ್ಟಿಗೆ ನಮ್ಮ ಬದ್‌ಕ್‌ಂತೇಳುವ ವಿಷ್ಯನ ಬರ್‌ದೊಳೊ.

ಕತಾ ಜೊಂಪೆ ವಿಭಾಗಲಿ ಕೂಡಕಂಡಿ ಓಂಶ್ರೀದಯಾನಂದವರ 'ಕಿಚ್ಚ್‌ನ

ಉರಿಂತೇಳುವ' ಕತೆನ, ಹೊಳೆಕರೆ ಚೆಂಗಪ್ಪವರ ಬಡಿಗೆಕೊಟ್ಟೊ! ಬಡ್ಸಿಕಂಡೊ! ಅಂತೇಳುವ ಮತ್ತೆ ಬೈತಡ್ಕ ಜಾನಕಿ ಬೆಳ್ಯಪ್ಪವರ 'ದೃಷ್ಟಿ' ಕತೆನ ಪ್ರಕಟಿಸ್ಯೊಳೊ. ಹರಟೆ ಮತ್ತೆ ಹಾಸ್ಯ ವಿಭಾಗಲಿ ಚಂದನ್ ನಂದರಬೆಟ್ಟುವರ 'ಹೊತಾರೆ ಊಲಿಟ್ಟ ಟಾಮಿ ನಾಯಿ'ಂತೇಳುವ ಹಾಸ್ಯಬರಹನ ಪ್ರಕಟಿಸ್ಯೊಳೊ. ಕವನ ವಿಭಾಗಲಿ ಬಾರಿಕೆ ಶೈಲಜ ದಿನೇಶರ 'ಸೂರ್ಯ', ಎಸ್.ಕೆ. ಈಶ್ವರಿವರ 'ಕೊರೊನಾ ಕಾಲ', ಸೀತಾರಾಮ ಕೇವಳರ 'ತೊಟ್ಟಿಲ ಹಾಡು', ಮಾವಾಜಿ ರಾಮಣ್ಣ ಅಚ್ಯುತರ 'ಯಾಕವ್ವ ಬಂದಿಯ ಕನ್ಸಲಿ' ಮತ್ತೆ ಭವನಿಶಂಕರ ಹೊದ್ದೆಟ್ಟಿವು ಬರ್ದ 'ಹಿಂದೆಲ್ಲ ನಡಿವ ಮೊದುವೆಗ' ಅಂತೇಳುವ ಕವನನ ಪ್ರಕಟಿಸ್ಯೊಳೊ. ಬನ್ನಿ ಓದೋಮಂತೇಳುವ ಅಂಕಣಲಿ ನಾಡ್‌ನ ಹೆಸರಾಂತ ಪತ್ರಿಕೆನ ಸಂಪಾದಕರಾಗಿರುವ ಗಿರೀಶ್ ರಾವ್ ಹತ್ವಾರ್‌ರ 'ಜಾನಕಿ ಕಾಲಂ'ತೇಳುವ ಅಂಕಣದ ಕಂಡಿಕೆನ ಪ್ರಕಟಿಸ್ಯೊಳೊ. ಭರತೇಶ ಅಲಸಂಡೆಮಜಲವು ಮುಖಪುಟ ಚಿತ್ರ ಹಸೆನ ಮಾಹಿತಿನ ಈ ಸಂಚಿಕೆಲಿ ಕೊಟ್ಟೊಳೊ.

ಈ ಸಂಚಿಕೆಲಿ ಪ್ರಕಟ ಆದ ಬರವಣೆಗೆಗೆ ಚಿತ್ರಕಲಾವಿದ ಪ್ರಸನ್ನ ಐವರ್ನಾಡು ಇವು ಗೆರೆಗಳ ಮೂಲಕ ಜೀವ ತುಂಬ್ಯೊಳೊ. ಸಂಚಿಕೆನ ಹೊರತಾಕೆ ಅಕಾಡೆಮಿನ ಅಧ್ಯಕ್ಷರ್, ಸಹ ಸಂಪಾದಕರ್, ಸರ್ವ ಸದಸ್ಯರ್ ಮತ್ತೆ ರಿಜಿಸ್ಟ್ರಾರ್ ಸಹಕರಿಸ್ಯೊಳೊ. ಬರಹಗಾರರ್ ತಮ್ಮ ಅಮೂಲ್ಯವಾದ ಬರವಣೆಗೆಗಳನ್ನ ನೀಡಿ ಸಂಚಿಕೆನ ಮೆರ್‌ಗ್‌ನ ಜಾಸ್ತಿ ಮಾಡ್ಯೊಳೊ. ಪ್ರತಿ ತಿದ್ದುವಲ್ಲಿ ಸಂಪಾದಕ ಮಂಡಳಿನ ಸಹಸಂಪಾದಕ ಪುರುಷೋತ್ತಮ ಕಿರ್ಲಾಯವು ಮತ್ತೆ ಸದಸ್ಯರಾದ ಬೈತಡ್ಕ ಜಾನಕಿ ಬೆಳ್ಯಪ್ಪ ಹಾಂಗೇ ಎಲ್ಲ ಸದಸ್ಯರ್‌ಗ ಕೈ ಜೋಡಿಸ್ಯೊಳೊ. ಭರತೇಶ ಅಸಂಡೆಮಜಲುವು ಮುಖಪುಟದ ಪೋಟೊ ನಿಡ್ಯೊಳೊ. ಆಕೃತಿ ಪ್ರಿಂಟ್ಸ್, ಮಂಗಳೂರು ಇವು ಲಾಯ್ಕಲಿ ಮುದ್ರಿಸಿ ಸಹಕರಿಸ್ಯೊಳೊ. ಸಂಚಿಕೆನ ಪ್ರಕಟಿಸಿಕೆ ಸಹಕರ್‌ಸಿದ ಎಲ್ಲವ್ಕೆ ಹೃದಯ ತುಂಬಿದ ಧನ್ಯವಾದಗಳ್‌ನ ಅರ್ಪಿಸಿನೆ.

ದಿನಾಂಕ: 31.12.2020

**ಡಾ. ದಯಾನಂದ ಕೂಡಕಂಡಿ**
ಸಂಪಾದಕರ್

ಪ್ರಕಟ ಆದ ಬರವಣೆಗೆಗೆ ಆಯಾ ಬರಹಗಾರರೆ ಜವಾಬ್ದಾರರ್

# ಹಿಂಗಾರ ಒಡ್ಸ್‌ಕನ

**ಕತಾ ಜೊಂಪೆ**



**ಹರಟೆ ಮತ್ತ್ ಹಾಸ್ಯ**



**ಬನ್ನಿ ಓದೋಮ**



**ಕವನ**



**ಮುಖಪುಟ ಚಿತ್ರದ ಪರಿಚಯ**

ವ್ಯಕ್ತಿ ಪರಿಚಯ

# ಕಲಾಶ್ರೀ ಕರ್ನಾಟಕ ಪೈಲೆ ಸಹನಾ ಚಂದನ್

●

ತೆಕ್ಕಡ ಬಿ. ಕುಮಾರಸ್ವಾಮಿ



ಮುತ್ತಾರ್ಮುಡಿ ಗ್ರಾಮದ ಪೈಲೆ ಸಹನಾ ಚಂದನ್ ಇವು ಪೈಲೆ ಮನೆ ಚಂದನ್ ಅವರ ಹೆಣ್ಣ್. ಈ ವರ್ಷ ಪೈಲೆ ಮನೆಗೆ ಮದುವೆ ಆಗಿ ಬಂದ ಸಹನಾ, ಹಿಂದೆ ಮೂಲೆ ಮಜಲು ಸಹನಾತೆ ಗುರುತಿಸಿಕಂಡವು. ರಾಷ್ಟ್ರ ಮಟ್ಟದವರೆಗೆ ಬೆಳೆದ್ನಿಂತ ಗಟ್ಟಿಗಿತಿ ಗೌಡತಿ ಹೇಳುವಂತದ್ ಗೌಡಜನಾಂಗಕ್ಕೆ ಒಂದು ಹೆಮ್ಮೆಯ ಸಂಗತಿ. ಪೆರಾಜೆ ಗ್ರಾಮದ ಮೂಲೆಮಜಲು ಬಿ. ಅಶೋಕ ಮತ್ತೆ ಸುನಿತಾ ಇವರ ಮಗಳ್. ಇವರ ಸುಮಧುರ ಕಂತಸಿರಿಗೆ ಶ್ರೇಷ್ಠ ಸಂಗೀತಗಾರ್ತಿ ಗಂಗೂಬಾಯಿ ಹಾನಗಲ್, ಎಸ್.ಪಿ. ಬಾಲಸುಬ್ರಮಣ್ಯನಂತವೇ ತಲೆ ದೂಗಿಯೊಳ. ಸಸ್ಯಶಾಸ್ತ್ರಲಿ ಎಂ.ಎಸ್ಸಿ. ಪಧವಿಧರೆ ವಿರಾಜಪೇಟೆನ ಅರಮೇರಿ ಕಾಲೇಜ್‌ಲಿ ಉಪನ್ಯಾಸಕಿ ಆಗಿ ಕೆಲ್ಸ ಮಾಡ್ತೋಳ ಇವು ಕರ್ನಾಟಕ ಶಾಸ್ತ್ರೀಯ ಸಂಗೀತ, ಸುಗಮ ಸಂಗೀತ ಪರಿಣಿತರ್. ವಿದ್ವತ್ ಅಭ್ಯಾಸ ಮಾಡ್ತಾ ಒಳ್.

ಇವು ಕೆ.ಆರ್ ಗೋಪಾಲಕೃಷ್ಣ ಅವರ ಗುರುಕೃಪೆಂದ ಬೆಳ್ದ್ ಬಂದವು. ವಿದ್ವಾನ್ ಎ. ಕಾಂಚನ ಭಟ್ ಇವರ್‌ಂದ ಸಂಗೀತ ಅಭ್ಯಾಸ ಮಾಡ್ಡ ಸಂಗೀತ ಯಕ್ಷಿಣಿ ತೇಳಕ್. ಯಾಕೆ ತೇಳಿರೆ ಈ ವರೆಗೆ 250ಕಿಂತಲೂ ಹೆಚ್ಚಿನ ಪ್ರಶಸ್ತಿ ಪುರಸ್ಕಾರಗಳ್ನ ಪಡ್ಡೊಳ. ಕೆನರಬ್ಯಾಂಕ್ ಎದೆತುಂಬಿ ಹಾಡುವೆನು, ಚಂದನವಾಹಿನಿ, ಆಕಾಶವಾಣಿ, ಚಂದನೋತ್ಸವ ಇಂತ ವಾಹಿನಿಗಳಲಿ ತಮ್ಮ ಗಾನ ಸುಧೆನ ಹರ್ಸಿಯೊಳ. ರಾಷ್ಟ್ರ ಮಟ್ಟಲಿ ಕರ್ನಾಟಕಂದ ಮೂರು ಸರ್ತಿ ಪ್ರತಿನಿಧಿಸಿದವು. ಗಂಗೂಬಾಯಿ ಹಾನಗಲ್ ಇವರಂದ ಚಕ್ಕದೀಪ ಪ್ರಶಸ್ತಿ ಪಡ್ಡ ಇವುಕೆ 'ವಿಜಯಶ್ರೀ' ಪ್ರಶಸ್ತಿ, 'ಬಾಲ ಸಂಗೀತ ಕಲಾಶ್ರೀ ನಿಧಿ' ಪ್ರಶಸ್ತಿ, 'ಸ್ವಾಮಿ ವಿವೇಕಾನಂದ ಬಾಲ ಗೌರವ' ಪುರಸ್ಕಾರ, 'ಪ್ರತಿಭಾಶ್ರೀ ಛತ್ರಪತಿ ಶಿವಾಜಿ' ಪ್ರಶಸ್ತಿ, ಕನ್ನಡ

ಮತ್ತ್ ಸಂಸ್ಕೃತಿ ಇಲಾಖೆಂದ 'ಅಸಾಧಾರಣ ಗೌರವ' ಪ್ರಶಸ್ತಿ, 'ಹೊಯ್ಸಳ' ಪ್ರಶಸ್ತಿ, 'ಕಲಾಶ್ರೀ ಕರ್ನಾಟಕ', 'ಉದಯರತ್ನ ಕೇರಳ' ರಾಷ್ಟ್ರೀಯ ಪ್ರಶಸ್ತಿಗಳು ಇವರ ಮುಡಿಗೇರಿಟ್ಟ್.

6ನೇ ವರ್ಷಂದ ಸಂಗೀತದ ಕಡೆ ಹೆಜ್ಜೆ ಇಸಿದವ್ರು ಮತ್ತ್ ಹಿಂದೆ ತಿರ್‌ಗಿ ನೋಡ್ತಲೆ. ಒಂದೊಂದೆ ಮೆಟ್ಟಿಲಿನ ಹತ್ತ್‌ತಾ ಕಲಾದೇವಿನ ಆರಾಧಿಸತ್ತಾ ಪ್ರಾಥಮಿಕ, ಪ್ರೌಢ ಶಾಲೆಂದ ಪದವಿ ಕಾಲೇಜ್, ರಾಜ್ಯ ಹಂಗೆ ರಾಷ್ಟ್ರಮಟ್ಟದ ಮುಟ್ಟ ಬೆಳ್ದ್ ಬಂದ ಇವು ಗೌಡ ಜನಾಂಗದ ಹೆಮ್ಮೆನ ಮನೆಮಗಳ್. ಸಹನಾ ಸಹನಶೀಲ ಸ್ವಭಾವದವ್ರು ಅಷ್ಟ್ ಮಹಾದೊಡ್ಡ ಸಾಧನೆ ಮಾಡ್ತೂ ಯಾವುದೇ ತರದ ಜಂಬ, ಅಹಾಂಕರ ಇಲ್ಲದರ್‌ನ ನೋಡ್ರೆ "ತುಂಬಿದ ಕೊಡ ತುಳುಕುಲೆ" ಹೇಳುವ ಗಾದೆ ಮಾತ್ ಸತ್ಯ. ಇವರ್‌ನ ಇನ್ನಷ್ಟ್ ಮತ್ತಷ್ಟ್ ಮೇಲೆ ತರುವಂತದ್ ಜನಾಂಗದ ಕೆಲಸ. ಅಕಾಡಮಿ ಈ ನಿಟ್ಟಿಲಿ ಇವ್ರುಕ್ ಪ್ರೋತ್ಸಾಹ ಕೊಡಕು, ತೀರಾ ಸಾಮಾನ್ಯ ಮಧ್ಯಮ ವರ್ಗದ ಈ ಹೆಣ್ ಮಗಳ್‌ನ ಮುಂದೆ ತರಕು. ಅನೇಕಾನೇಕ ಕಾರ್ಯಕ್ರಮಗಳ್‌ನ ಕೊಡ್ತಾ ಬಂದ ಇವು ವಿಶ್ವ ತುಳು ಸಾಹಿತ್ಯ ಸಮ್ಮೇಳನ, 7ನೇ ಕನ್ನಡ ಸಾಹಿತ್ಯ ಸಮ್ಮೇಳನ, ಆಕಾಶವಾಣಿ, ಕರಾವಳಿ ಉತ್ಸವ, ಕೊಡಗು ದಕ್ಷಿಣ ಕನ್ನಡ ಗೌಡ ಅಕಾಡೆಮಿ, ಕನ್ನಡ ಮತ್ತ್ ಸಂಸ್ಕೃತಿ ಇಲಾಖೆ, ಧರ್ಮಸ್ಥಳ ಲಕ್ಷದೀಪೋತ್ಸವ, ಸುಬ್ರಮಣ್ಯ ಕಿರು ಷಷ್ಠಿ ಉತ್ಸವ, ರೋಟರಿ, ಲಯನ್ಸ್ ಏರ್ಪಡಿಸಿದ ಜಂಬರಗಳಲ್ಲಿ ತಮ್ಮ ಕಂಠಸಿರಿನ ಹೊರಹಾಕಿ ಜನಮನ ಗೆದ್ದೊಳ.

ಇವರ ಸಾಧನೆ ನೊಡಿ ಗೌರವ ಹಂಗೆ ಮೆಚ್ಚುಗೆ ಕೊಟ್ಟವ್ರು ಎಸ್.ಪಿ. ಬಾಲಸುಬ್ರಮಣ್ಯ, ಗಂಗೂಬಾಯಿ ಹಾನಗಲ್, ಡಾ॥ ವೀರೇಂದ್ರ ಹೆಗ್ಗಡೆ, ಡಾ॥ ಮೋಹನ್ ಆಳ್ವ (ಆಳ್ವಾಸ್ ವಿದ್ಯಾಸಂಸ್ಥೆ ಸ್ಥಾಪಕರ್), ಜೀವನ್ ಕಾಮತ್ ಸುಳ್ಯ, ದೊರೆ ಭಗವಾನ್, ಅನಂತವೇಲು (ಚಿತ್ರನಟ), ಬಿ. ಜಯಶ್ರೀ, ವಿ. ಮನೋಹರ, ಹಂಸಲೇಖ, ನಿರ್ಮಲಾನಂದ ಸ್ವಾಮಿ, ಡಾ॥ ಮಹೇಶ್ ಜೋಶಿ (ಚಂದನ ವಾಹಿನಿ ನಿರ್ದೇಶಕರ್), ಶ್ಯಾಮಲ ಶ್ರೀ ಭಾವೆ, ಜಯಚಾಮರಾಜೇಂದ್ರ ಅರಸ್ ಮುಂತಾದವ್ರು. ಶಿಕಕ್ಷಿ ಆಗಿ ಇಲ್ಲಿಗೆ ಮುಟ್ಟ ಇವ್ರು ಮಕ್ಕಳ್‌ನ ಪ್ರಾಥಮಿಕ ಮತ್ತ್ ಪ್ರೌಢಶಾಲೆ ವಿಭಾಗಂದ ಪ್ರತಿಭಾ ಕಾರಂಜಿಲಿ ರಾಜ್ಯ ಮಟ್ಟ ಮುಟ್ಟ ಕರ್ಕಂಡ್ ಹೋದವ್ರು. ಮಕ್ಕಳಗೆ ಸುಗಮ ಸಂಗೀತ, ರಂಗಗೀತೆ, ಜಾಡ್ಪನ, ಲಾವಣಿ ಘಝಲ್, ಭಾವಗೀತೆ,

ದೇಶಭಕ್ತಿ ಗೀತೆ, ಜನಪದ ಗೀತೆಗಳ ಮಕ್ಕಳಿಗೆ ಕಂಠಪಾಠ ಮಾಡ್ಸಿಯೊಳೊ. ಮಕ್ಕಳಿಗೆ ತಮ್ಮೊಟ್ಟಿಗೆ ಬೆಳೆವ ಅವಕಾಶ ಕೊಟ್ಟೋಳೊ. ಸಾಹಿತ್ಯ ಕ್ಷೇತ್ರಲಿ ಸನ ಇವರ ಸೇವೆ ಬಹಳಷ್ಟು ಉಟ್ಟು. ಗದಗ್‌ನ ಕಲಾವಿಕಾಶ ಪರಿಷತ್ತ್‌ಲಿ "ಮಕ್ಕಳ ಮನಸ್" ಕವನ ಸಂಕಲನಲ್ಲಿ ಇವರ ಕವನಗ, ಉದಯವಾಣಿ, ಸಂಯುಕ್ತ ಕರ್ನಾಟಕ, ವಿಜಯ ಕರ್ನಾಟಕ ಪತ್ರಿಕೆಗಳ್‌ಲಿ ಪ್ರಬಂಧ, ಅಂಕಣ, ಕವನಗ ಪ್ರಕಟ ಆಗುಟ್ಟು.

ಚಿತ್ರಕಲೆಲಿ ಸನ ಇವರ ಕೈಚಳಕ ಅನಾವರಣ ಆಗುಟ್ಟು. ಬಣ್ಣ ಬಣ್ಣದ ಚಿತ್ರಗ, ವರ್ಲಿಆರ್ಟ್, ಸೀಮೆಸುಣ್ಣಲಿ ಸೂಕ್ಷ್ಮ ಕಲಾಕೃತಿಗ, ಕರಕುಶಲ ವಸ್ತುಗಳ ತಯಾರಿಕೆ ಇದರ ಒಟ್ಟೊಟ್ಟಿಗೆ ಇವು ಮಾಡ್ದ ನಾಟಕಗ 'ಪನ್ನರಸಿ' 'ಪನ್ನದಾಸಿ', 'ಅಂಗುಲಿಮಾಲಾ', 'ಚಂದ್ರಹಾಸ', 'ಪಂಜರಶಾಲೆ', ಅಷ್ಟೆ ಯಾಕೆ 'ಸುದರ್ಶನ ವಿಜಯ', 'ತಾರಾಕಾಸುರ ವಧೆ', 'ಲವಕುಶ ಕಾಳಗ' ಇಂತ ಯಕ್ಷಗಾನಗಳ್‌ನ ಪ್ರದರ್ಶನ ಮಾಡಿ ಚಪ್ಪಾಳೆ ಗಿಟ್ಟಿಸಿ ಕಂಡವು. ಚದುರಂಗ ಆಟಲಿ ರಾಷ್ಟ್ರ ಮಟ್ಟಲಿ ಮೂರು ಬಾರಿ ಆಡಿ ಬಂದವು.

ಇನ್ನೊಂದು ವಿಚಾರ ತೇಳಿರೆ ಇವರ ಬಾಳಸಂಗಾತಿ ಜೈಲೆ ಮನೆ ಚಂದನ್ ಇವು ಜೈಲೆ ರಾಮಣ್ಣ ಮತ್ತೆ ಭಾಗೀರಥಿ ಇವರ ಮಂಙ. ಒಳ್ಳೆ ಕ್ರೀಡಾಪಟು, ಹಾಕಿ ಆಟಲಿ ಮೂರು ಸಲ ರಾಷ್ಟ್ರ ಮಟ್ಟಲಿ ಆಡ್ದವು. 500 ಮೀಟರ್, 800 ಮೀಟರ್ ಓಟಲಿ ಕರ್ನಾಟಕ, ಪಂಜಾಬ್, ಚೆನ್ನೈ ರಾಜ್ಯಗಳಲ್ಲಿ ಸ್ಪರ್ಧಿಸಿದ ಇವು 12 ಕಿ.ಮಿ ಕ್ರಾಸ್‌ಕಂಟ್ರಿ, 21 ಕಿ.ಮೀ ಆಫ್ ಮೆರಾಥನ್‌ಲಿ ರಾಜ್ಯಮಟ್ಟಲಿ 4 ಬಹುಮಾನ ಪಡ್ದ ಇವುಕೆ ಬಹಳಷ್ಟ್ ಪ್ರಶಸ್ತಿ, ಪುರಸ್ಕಾರಗ ಸಿಕ್ಕಿಟ್. ಕೊಡಗು ಗೌಡ ಸಮಾಜ ಮಡಿಕೇರಿ ಇವು ಚಂದನ್ ಇವರ್ನ ಪ್ರಶಸ್ತಿ ಪ್ರದಾನ ಮಾಡಿ ಗೌರವಿಸಿಯೊಳ. ಇವರ ಇನ್ನೊಂದು ಹವ್ಯಾಸ ನಾಣ್ಯ ಸಂಗ್ರಹ, 1944ರ್‌ಂದ ಹಿಡ್ದ್ ಇಲ್ಲಿನವರೆಗೆ ಇರುವ ಎಲ್ಲಾ ದುಡ್ಡು, ಕಾಸ್ ನಾಣ್ಯ, ನೋಟು ಎಲ್ಲಾ ಉಟ್ಟು. ಈ ಇಬ್ಬರು ಜೋಡಿಗಳ ಸಾಧನೆ ಅಸಾಧಾರಣದ್ ಎಲೆಮರೆಯ ಕಾಯಿ. ಹಂಗೆ ಇವರ ಕಾರ್ಯಸಾಧನೆ ಇನ್ನಷ್ಟ್ ಪ್ರಜ್ವಲಿಸಕು.

ಇವರ ಸಂಪರ್ಕ ಸಂಖ್ಯೆ ಸಪನಾ : 9449591433, ಚಂದನ್ : 8277259545

---

**ತೆಕ್ಕಡ ಬಿ. ಕುಮಾರಸ್ವಾಮಿ**
ಮುತ್ತಾರ್ಮುಡಿ ಗ್ರಾಮ, 948323433



# ಕೊಡಗು ಅರೆಬಾಸೆನ ಕೂಸುನ ಬಾಸೆ (ಬಾಲ ಬಾಸೆ)

●

ಡಾ. ಲಾವಣ್ಯ ಸಿ.ಪಿ. ಕೊಟ್ಟಕೇರಿಯನ

ಮಕ್ಕಳಿಗೂ ಬಾಸೆ ಉಟ್ಟು. ಮಕ್ಕ ಹುಟ್ಟಿದ ದಿನಂದ ಐದ್ ವರ್ಶ ಆಕೆ ಮುಟ್ಟ ಅವರ 'ಕೂಸು' ಅಂತ ಹೇಳಿವೆ. ಈ ಕೂಸುನ ಬಾಸೆ ಬ್ಯಾರೆ ತರಲಿ ಇದ್ದುದೆ. ಕೂಸು ತಾನ್ ಮಾತಾಡಿಕೆ ಒಂದ್ ಹೊಸ ಬಾಸೆನ ತಾನೇ ಮಾಡಿ ಕಣಿಕೆ ಸಾದ್ಯ ಇಲ್ಲೆ. ಹಾಂಗೆ ಕೂಸುನ ಅಪ್ಪ ಅವ್ವನೂ ಅವರವರ ಕೂಸುಗಳಿಗಾಗಿ ಒಂದ್ ಹೊಸ ಬಾಸೆನ ಅವೇ ಮಾಡಿ ಕಣಿಕೆನೂ ಸಾದ್ಯ ಇಲ್ಲೆ. ಆದರೆ ಒಂದು ಬಾಸಿಕ ಸಮಾಜ ಅದರ ಬಾಸೆಲಿರುವ ಕೆಲವು ಪದಗಳ ಹಂಙ ಬದಲ್ಸಿಕಂಡ್. ಹೆಚ್ಚಿ ತೇಳ್ ಅದ್‌ಕೆ ಹಂಙ ಹೊಸ ರೂಪನ ಕೊಟ್ಟ್ ಕೂಸುನೊಟ್ಟಿಗೆ ಮಾತಾಡಿವೆ. ಈ ಬಾಸಿಕ ರೂಪನ 'ಕೂಸುನ ಬಾಸೆ' ಅಂತ ಬಾಸಾ ವಿಜ್ಞಾನಿಗ ಗುರ್ತುಸಿಯೊಳೊ. ಕೂಸುನ ಬಾಸೆ ಸನ ಆ ಪರಿಸರಲಿ ಇರುವ ಬಾಸೆನ ನಿಯಮಕೆ ಸರಿಯಾಗಿಯೇ ಇದ್ದುದೆ. ಒಂದು ಬಾಸೆಲಿ ಕೂಸುನ ಬಾಸೆನ ಪದಗಳ ರೂಪಗ ಆ ಬಾಸೆನ ಸರಳ ರೂಪ ಆಗಿದ್ದುದೆ. ಇಲ್ಲರೆ ಆ ಬಾಸಿಕ ಪರಿಸರಲಿ ಇರುವ ಪ್ರಾಣಿ, ವಸ್ತುಗ, ಮೋಟಾರ್‌ಗ ಇವುಗಳ ಅನುಕರಣ ಆಗಿದ್ದುದೆ. ಈ ಎಲ್ಲದರ ಹಿಂದೆ ಇರುವ ಉದ್ದೇಸ ಹುಟ್ಟಿದ ಕೂಸುಗೆ ನಿದಾನಕೆ ಅದ್ ಬಾಳೋಕಾದ ಪರಿಸರನ ಕೂಸುನ ಬಾಸೆ ಪರಿಚಯ ಮಾಡಿಕೊಡುದೇ ಆಗಿದ್ದುದೆ.

## ಕೂಸು ಬಾಸೆ ಕಲಿಯುವಲ್ಲಿ ಅವ್ವನ ಪಾತ್ರ

ಅವ್ವ ಕೂಸುನ ಮೊದಲ ಗುರು. ಸಣ್ಣದರಲಿ ಕೂಸು ಎಲ್ಲದಕ್ಕೂ ಅವ್ವನ ಅವಲಂಬಿಸಿದ್ದುದೆ. ಹಾಂಗೆ ಕೂಸುಗೆ ಬಾಸೆನ ಕಲ್ಸುವಲ್ಲಿನೂ ಅವಳ ಪಾತ್ರ ಹೆಚ್ಚ ಇದ್ದುದೆ. ಆಗ ಅವ್ವ ಅವಳ

ಕೂಸಿಗೆ ಬಾಸೆ ಕಲ್ಸ್‌ಕನ ಕಸ್ಟದ ರೂಪ ಬುಟ್ಟ್ ಅದನ ಸುಲಬ ಮಾಡಿ ಕೂಸುನೊಟ್ಟುಗೆ ಮಾತಾಡ್ವೆ. ಒಂದೋ ಹೊಸ ಪದನ ಮಾಡ್‌ದೆ ಇಲ್ಲೆ ಹಿಂದೆ ಆ ಸಮಾಜಲಿ ಮಕ್ಕ ಮಾತಾಡ್ವ ಬಾಸೆನೇ ಹೇಳಿಕೊಟ್ಟದೆ.

ಕೂಸು ಹುಟ್ಟಿದಲ್ಲಿಂದ ಅವ್ವ ಅದರ ಅಂಗೈಲಿಟ್ಟ್ ಸಾಂಕಿದೆ. ಕೂಸಿಗೆ ಯಾವ ಬಾಸೆನೂ ಅರ್ತ ಮಾಡಿ ಕಣುವ ಸಕ್ತಿ ಇಲ್ಲೇಂತ ಹೇಳುವ ಸತ್ಯಅವ್ವಂಗೆ ಗೊತ್ತಿದ್ದರೂ ಕೂಸುನೊಟ್ಟುಗೆ ಮತಾಡ್ವೆ. ಅವ್ವಂದಲಿಗೆ ತನ್ನ ಕೂಸುನ ಜೈವಿಕ ಸಬ್ದಗಳನ ಬಳ್ಸಿಕಂಡ್ ಕೂಸುನೊಟ್ಟುಗೆ ಅದಸ್ಟ್ ಬ್ಯಾಗ ಮಾತಾಡಿಕೆ ಆ ಕೂಸಿಗೆ ಉತ್ತೇಜನ ಕೊಡುವ ಒಂದ್ ಕಲೆ ಇದ್ದದೆ ಕಂಡದೆ. ಹಾಂಗಾಗಿ ಕೂಸುನ ತೊದಲು ಬಾಸೆಗೆ ಒಂದ್ ಉದ್ದೇಸನ ಕೊಟ್ಟ್‌ಕಂಡ್ ಅವ್ವ ಯಾಗೋಳು ಕೂಸುನೊಟ್ಟುಗೆ ಮಾತಾಡ್ತಾ ಇದ್ದದೆ. ಕೂಸಿಗೆ ಹೊಟ್ಟೆ ಹಸಿಯುಕನ, ನಿದ್ರಂದ ಎದ್ರ್‌ಕನ, ಮೀಸ್‌ಕನ ಅದರ ಪ್ರಸ್ನೆ ಮಾಡುವಂಗೆ ಮಾತಾಡ್ವೆ. ಆ ಪ್ರಸ್ನೆಗಳ ಮದ್ಯೆಲಿ ಕೂಸುನ ಪ್ರತಿಕ್ರಿಯೆಗ ಕಾದದೆ. ಅವ್ವನ ಕೂಸುನ ಈ ಒಡನಾಟ ಕೂಸುನ ಮುಂದ್ನ ಹಂತದ ಸಂಬಾಸಣೆನ ರೂಪ್‌ಸಿದೆ.

ಕೂಸುನ ಬಾಸೆ ಮಕ್ಕಳ ಒಂದ್ ವಯಸ್ಸ್‌ನವರೆಗೆ ಮಾತ್ರ ಬಳಕೆಲಿ ಇದ್ದದೆ. ಅಲ್ಲದೆ, ಕೂಸುನ ಬಾಸೆನ ರೂಪಗ ಕೂಸುನ ಅವ್ವ ಮತ್ತೆ ಕೂಸುನ ಮದ್ಯೆಲಿ ಒಂದ್ ಬುಡ್ಸಿಕೆ ಆಗದ ಸಂಬಂದನ ಬೆಳ್ಸಿದೆ. ಸುರೂನ ಹಂತಲಿ ಕೂಸು ಮರ್ದುದೇ ಅದರ ಬಾಸೆ. ಮರ್ದ್‌ಕನ ಕೂಸು ಬ್ಯಾರೆ ಬ್ಯಾರೆ ರೂಪನ ಹೊರ್ಡಿಸಿದೆ. ಎರಡನೆ ಹಂತಲಿ ಮಕ್ಕ ಅವ್ವನ ಇಲ್ಲರೆ ಮನೆಲಿ ಇರುವವರ ದ್ವನಿಗಳ ಗುರ್ತಿಸಿದೆ. ಅಸ್ಟ್ ಹೊತ್ತಿಗೆ ಕೂಸಿಗೆ ಒಂದ್ ವರ್ಸ ಆಗಿದ್ದದೆ. ಆ ಹೊತ್ತಿಗೆ ಕೂಸ್‌ನ ಪದಕೋಸಲಿ ಸುಮಾರ್ ಪದಗ ಸೇರಿದ್ದವೆ. ಉದಾಹರಣೆಗೆ ಅಪ್ಪ, ಅವ್ವ, ಮಾಮ್, ಅಂಬಾ, ಬುವ್ವ, ಬ್ಯು ಇತ್ಯಾದಿ.

ಎರಡ್ ವರ್ಸ ತುಂಬ್‌ಕನ ಕೂಸು ಸುಮಾರ್ ಸಬ್ದಗಳ ಹೇಳಿಕೆ ಆಗಿದ್ದದೆ. ಉದಾಹರಣೆಗೆ ಅಪ್ಪ ಬಾತ್, ಅವ್ವ ಬಾತ್, ಹೀಂಗೆ ಎರಡ್ ಪದಗಳ ಹೇಳುವಸ್ಟ್ ಆಗಿದ್ದದೆ. ಈ ಹಂತಲಿ ಕೂಸುನ ಬಾಸೆಲಿ ಅನುಕರಣೆ ಬಂದದೆ. ಆಗ ಕೂಸು ಪ್ರಾಣಿ, ವಾಹನ, ಇದರ ಸದ್ದ್‌ನ ಅನುಕರಣೆ ಮಾಡ್ವೆ. 'ಅಂಬಾ, 'ಬೌ ಬೌ 'ಮಿಯ್ಯ, ಬರ್ರ್.. ಪೋಂ.. ಪೋಂ ಹೀಂಗೆ ಅನುಕರಣೆನ ಸಬ್ದಕೆ ಒಂದ್ ಬಾಸಿಕ ರೂಪ ಕೊಟ್ಟದೆ.

ಮೂರ್ ವರ್ಷಕೆ ಕೂಸು ಮಾತಾಡಿಕೆ ಸುರು ಮಾಡಿದ್ದದೆ. ಅದರ ಉಚ್ಚಾರಣೆ ಹೆಚ್ಚು ತಪ್ಪಾಗಿದ್ದದೆ. ಆದರೆ ಆ ಕೂಸು ಅದರ ಪ್ರಕಾರಲಿ ಸರಿಯಾಗಿನೇ ಉಚ್ಚಾರ ಮಾಡ್ತಾ ಇದ್ದದೆ. ಆ ಕೂಸು ಹೇಳ್ದಂಗೆ ನಾವೂ ತಪ್ಪು ಉಚ್ಚಾರ ಮಾಡ್ದರೆ ಆ ಕೂಸು ಅದರ ಒಪ್ಪುದುಲೆ. ಉದಾಹರಣೆಗೆ: ಏರ್‌ಪ್ಲೇನ ಕೂಸು 'ಏಪ್ಪು' ಅಂತ ಉಚ್ಚಾರ ಮಾಡ್ದೆ. ಆಗ ಕೂಸುನ ಅಪ್ಪ ಕೂಸುನೊಟ್ಟಿಗೆ ಏಪ್ಪು ಅಪ್ಪಿ ಅಂತ ಹೇಳ್ದರೆ ಆಗ ಕೂಸು ಅಲ್ಲಿ 'ಏಪ್ಪು' ಅಂತ ಹೇಳ್ದೆ. ಆಗ ಅದರಲಿ ನಾವು ಕೂಸು ಸರಿಯಾಗಿಯೇ ಉಚ್ಚಾರ ಮಾಡ್ತಾ ಇರುದರ ಕಾಂಬಕ್.

ನಾಲ್ಕನೇ ವರ್ಷಲಿ ಕೂಸುನ ಬಾಸೆನ ರೂಪಗ ಕಡಿಮೆಯಾಗಿ ಅದ್ ಮಾಮೂಲಿ ಬಾಸೆನ ಕಲೀತಾ ಇದ್ದದೆ. ಆದರೂ ಕಷ್ಟದ ಪದಗಳ ಹೇಳಕೆ ಕಷ್ಟಪಟ್ಟದೆ. ಐದ್ ವರ್ಷಕೆ ಕೂಸುನ ಬಾಸೆ ಬೆಳ್ದು ಪ್ರೌಡ ಬಾಸೆನ ಕೂಸು ರೂಪಿಸಿಕಂಡದೆ.

### ಅರೆಬಾಸೆಲಿ ಕೂಸುನ ಬಾಸೆನ ರೂಪಗ

ಕೊಡಗು ಅರೆಬಾಸೆ ಪರಿಸರಲಿ ಇರುವ ಕೂಸುನ ಬಾಸೆಲಿ ಬ್ಯಾರೆ ಇತರ ಬಾಸೆಲಿರುವ ಕೂಸುನ ಪದಗಳ ರೂಪಗ ಕೂಡ ಇರುದರ ನಾವು ಕಾಂಬಕ್. ಆ ಪದಗ ಎಲ್ಲಾ ಬಾಸೆಲೂ ಕೂಸುನ ಬಾಸೆಲಿ ಬಳಕೆ ಆವ ಸಾಮಾನ್ಯ ಪದಗಳೇ ಆಗಿದ್ದದೆ. ಅದಲ್ಲದೆ ಇಲ್ಲಿ ವಿಸಿಷ್ಟ ಪದಗಳ ಈ ಕೆಳಗಿನಂಗೆ ಗುರ್ತುಸಕ್.

### ಕೂಸಿಗೆ ಊಟ ಮಡ್ಸ್‌ಕನ

ಕೂಸಿಗೆ ಊಟ ಮಾಡ್ಸ್‌ಕನ ಅಪ್ಪ 'ಮಾಮ್ ಮಾಡಿಯಾನಾ' ಅಂತ ಕೆಳ್ದೆ. ತಿಂಬೋ ಕ್ರಿಯೆಲಿ ತಿಂಬೊದರ 'ಮಾಮ್ ಮಾಮ್' ಹೇಳಿ ಉಣ್ಣುವಂಗೆ ಮಾಡ್ದೆ. ಕೂಸುನ ಊಟಲಿ ಬಾಳ ಮುಖ್ಯ ಮೊಲೆಹಾಲ್. ಇದನ ಕೂಸಿಗೆ ಹೇಳ್‌ಕನ ಅನ್ನ 'ಬೋಬು' ಅಂತ ಹೇಳಕೊಟ್ಟದೆ.. 'ನೀರಿಗೆ' 'ಅಬೂ'. 'ಬೂ'. ಎಂತಾರ್ ತಿಂಬೋ ಪದಾರ್ತ 'ಕಾರ' ಇದ್ದರೆ ಕೂಸು ಅದನ ಮುಟ್ಟಕೆ ಅತ್ವಾ ತಿಂಬಕೆ ಬಂದರೆ 'ಹಾ.....' ಅಂತ ಹೇಳಿ ಕೂಸುಗೆ ಅದರ ತಿಂದರೆ ಕಾರ ಆದೇತ ಎಚ್ಚರಿಕೆ ಕೊಟ್ಟದೆ. ಚಾಕೋಲೇಟ್, ಬಿಸ್ಕತ್ತು ಇವುನ ಕೂಸಿಗೆ ಹ್ರಸ್ವಕರಣ ಮಾಡಿ ಚಾಕಿ, ಬಿಸ್ಕಿ ಹೀಂಗೆ ಹೇಳಿ

ಕೊಟ್ಟಿದೆ. ಮಕ್ಕ ಜಾಕಿ. ಜಿಕ್ಕಿ ಅಂತನೆ ಹೇಳ್ತಿರ ನಾವು ಗಮನ್ಸಕ್.

## ಕೂಸುನ ಮೀಸ್‌ಕನ

ಅವ್ವ ಜ್ಯಾರೆಯುವರೊಟ್ಟಿಗೆ 'ಕೂಸುನ ಮೀಸೋಕು' ಅಂತ ಹೇಳ್ದರೂ, ಅದೇ ಅವ್ವ ಕೂಸಿಗೆ 'ನಾವು ಜಿಜ್ಜಿ ಮೀಯನೋ' ಅಂತ ಹೇಳ್ಡೆ. ಮೀಸುದರ ಕೂಸಿಗೆ ಗೊತ್ತ್ ಮಾಡಿಕೆ ಮೀಸ್‌ಕನ 'ಉಸ್....., ಇಸ್....'ತ ಸದ್ದ್ ಮಾಡ್ದು ಮಾಡಿವೆ. ಮೂತ್ರ ಮಾಡಿಕೆ 'ಚೊರ್ರ, ಸೂ...., ಸೂಸೂ' ಅಂತ ಹೇಳಿ ಕಲ್ಸಿವೆ. ಹಾಂಗೆ ಮಕ್ಕ ಸಣ್ಣದರ್‌ಲಿ ಎಂತ ಕಂಡರೂ ಅದರ ಮುಟ್ಟಿಕೆ ಹೋದವೆ. ಅದ್ ಹುಳ, ಪಿಜಿನ್ ಎಂತಾರ್ ಆಗಿದ್ದರೆ ಕೂಸಿಗೆ ಕಚ್ಚಿದೆ. ಕೂಸಿಗೆ ಅದ್ ಗೊತ್ತಾಲೆ. ಅದಕೆ 'ಹಾಜೀ.., ಆಪಿ..' ಅಂತ ಹೇಳಿ ಕೂಸಿಗೆ ಹೆದ್ರಿಕೆ ಆಗುವಂಗೆ ಮಾಡಿವೆ. ಆಗ ಇನ್ನೊಮ್ಮೆ ಯಾಗಾರ್ ಕೂಸು ಹುಳನ ಕಂಡರೆ ಮತ್ತೆ ಪಿಜಿನ್‌ನ ಕಂಡರೆ ಅದೇ 'ಹಾಜೀ...'ತ ಹೇಳಿ ದೂರ ಹೋದೆ.

## ಅನುಕರಣೆ ಪದಗ

ಕೂಸುನ ಬಾಸೆಲಿ ನಮಿಗೆ ಸುಮಾರ್ ಅನುಕರಣೆ ಪದಗ ಸಿಕ್ಕಿವೆ. ಕೂಸು ಮಾತ್ ಕಲಿಯಕೆ ಮುಂದೆನೇ ಕೂಸುಗೆ ಅವ್ವ ಅತ್ತಾ ಮನೆಲಿದ್ದವು ದನಗಳ ತೋರ್ಸಿ ಅದ್ ಕೂಂಗಿದಂಗೆ 'ಅಂಬಾ' ಹೇಳಿ ತೋರ್ಸಿವೆ. ಕೂಸ್ ಮಾತ್ ಕಲ್ತಮ್ಯಾಲೆ ದನಗಳ ಕಂಡರೆ 'ಅಂಬಾ' ಹೇಳಿ ದನಗಳ ತೋರ್ಸಿದೆ. ಹಾಂಗೆ ಬೌಬೌ (ನಾಯಿ), ಕೊಕ್ಕ (ಕೋಳಿ), ಬೊಬ್ಬ (ದನ), ಕಾಕಾ (ಕಾಕೆ), ಮಿಯ್ಯ(ಕೊತ್ತಿ), ಚಿಂಯಿಚಿಂಯಿ(ಹಕ್ಕಿ), ಪೋಂಪೋಂ/ಬ್ಬುರ್ (ಬಸ್ಸ್, ಕಾರ್, ಜೀಪ್), ಕೀಕೀ(ಬೈಕ್), ಡಣಡಣ/ಟಿಣ್‌ಟಿಣ್(ಗಂಟೆ), ಡಂ (ಪಿಟಾಕಿ), ಚುಂಯಿ(ದೋಸೆ) ಹೀಂಗೆ ಕೂಸು ಅವುಗಳ ಸದ್ದ್ ಹೆಂಗೆ ಇದ್ದದೆ ಹಂಗೆ ಸದ್ದ್ ಮಾಡುವ ಮೂಲಕ ಅವುಗಳ ಅನುಕರಣೆ ಮಾಡಿ ತನ್ನ ಬಾಸೆಲಿ ಆ ಪದಗಳ ಬಳ್ಸಿದೆ. ಈ ಪದಗ ಕೂಸುನ ಬಾಸೆಲಿ ಸಹಜ ರೂಪಗ ಆಗಿದ್ದವೆ.

ಕೊಡಗು ಜಿಲ್ಲೆಲಿರುವ ಗೌಡ ಸಮುದಾಯದ ಅರೆಬಾಸೆನ ಪರಿಸರಲಿ ಕೂಸುನ ಬಾಸೆನ ರೂಪಗಳ ಈ ಕೆಳಗಿನಂಗೆ ಕಾಂಬಕ್.

ಅಪ್ಪಿ (ರೊಟ್ಟಿ)
ಆಬೂ (ನೀರ್)
ಕುಪ್ಪ (ಬಟ್ಟೆ)
ಕೂಚು (ಕುದ್ದುರು)
ಕೊಕ್ಕ (ಕೋಳಿ)
ಜೀಜೀ (ತೊಟ್ಟಿಗಿಲ್)
ಜೂಜಿ (ನಿದ್ದೆ)
ಪೊವ್ವ (ಪೊರ್ಲು)
ಜೊಬ್ಬ (ದನ)
ಮಾಮ್ (ಉಂಬೊದು)
ಮಿಯ್ಯ (ಕೊತ್ತಿ)
ಬುಸ್ಸ್ (ಹಾವು)
ಚಂದ (ಪೊರ್ಲು)
ಅಂಬಾ (ದನ)
ಆಯಿ (ಗಾಯ/ಬ್ಯಾನೆ)
ಉಪ್ಪ/ಉಮ್ಮ (ಮುತ್ತು)
ಕಾ (ಕಾಕೆ)
ಮ್.....ಮ್....(ಗುಮ್ಮ)
ಚುಂಯಿ (ಇಂಜೆಕ್ಷನ್)
ಟೈ/ಪಟಾ (ಪೆಟ್ಟ್, ಹೊಡ್ತ)
ಬುವ್ವ (ಬಸ್ಸ್‌ಇತ್ಯಾದಿಲಿ ಹೋದು)
ತಾನಿತಾನಿ (ನಡೆಯುದು)
ಹಾಜಿ/ಹಾಪಿ (ಹುಳ)
ಮಾಮಿ (ದೇವ)
ಮೋಬು (ಮೊಲೆಹಾಲ್)
ಜೌಜೌ (ನಾಯಿ) ಇತ್ಯಾದಿ.

**ಅರೆಬಾಸೆಲಿ ಮಕ್ಕಳ ಪದಗ**

ಕೊಡಗು ಜಿಲ್ಲೆನ ಅರೆಬಾಸೆ ಗೌಡ ಸಮುದಾಯದ ಕುಟುಂಬದ ವಲಯಲಿ ಮಕ್ಕಳ ಆಡ್ಸ್‌ಕನ, ಮಕ್ಕ ಮರ್ಡ್‌ಕನ ಇಲ್ಲೆ ಬ್ಯಾರೆ ಸಂದರ್ಭಲಿ ಅದಕೆ ತಕ್ಕಂಗೆ ದೊಡ್ಡವು ಎಂತಾರ್ ಒಂದ್ ಹಾಡ್ ಹೇಳಿ ಕೊಟ್ಟವೆ. ಇದರ ಕೇಳಿ ಮಕ್ಕಳಿಗೆ ಕುಸೀ ಆದೆ. ಮಕ್ಕ ಮರ್ದುದರ ನಿಲ್ಲಿ ಪದ ಕೇಳಿವೆ. ಇವರಲ್ಲಿ ಇರುವ ಕೆಲವು ಮಕ್ಕಳ ಪದಗ ಹೀಂಗೆ ಒಳೊ.

ಅಪ್ಪಂಗೆ ಜೊರ
ಅವ್ವಂಗೆ ಕುರ
ನಂಗೆಮ್ಮೆ ಪಾರ
ಚಾಂಪಂಗೆ ದನ ಪಾರ
ಚಾಮೆವ್ವಂಗೆ ಮಕ್ಕಳ ಪಾರ
ನೀವ್ಗೆ ಮಾತ್ರ ನನ್ನ ಸಸಾರ

ಎಮ್ಮೆನ ಗದ್ದೆಲಿ ಬುಟ್ಟ್ ಮೇಸಿಕೆ ಹೋದಗೂಡೆ ಹೇಳ್ತ ಪದ ಹೇಳಿ ಮಕ್ಕಳಿಗೆ ಹೇಳಿ ಕೊಟ್ಟಿದ್ದವೆ.

ಮನೆಲಿ ದೊಡ್ಡವು ಮಕ್ಕಳ ಎರ್‌ಡ್ ಕೈಲಿ ಮ್ಯಾಲೆ ಎತ್ತಿ ಅತ್ತ-ಇತ್ತ

ಬೊಗ್ಗಿಸಿ ಆಡ್ಸಿಕಂಡ್ ಹೇಳುವ ಪದ,

ಕೇಡ್‌ಗಿಡ್‌ಜ್ಜ.....ಕೆಂದಗಿಡ್‌ಜ್ಜ
ಅಂಗಳದಲ್ಲಿದ್ದ ಬಿಳಿ ಕೋಳಿ
ಪಿಳ್ಳೆನ ತಕೊಂಡೋಗಿ
ಬಾಗೆ ಮರಲಿ ಕುದ್ದತ್...
ಬಾಗೆ ಮರ ಬಾ......ಗಿ ಹೋತ್.

ಹಾಂಗೆ ಕಾಲ್‌ನ ಮ್ಯಾಲೆಕೂರ್ಸಿತೂಗಿಕಂಡ್ ಹೇಳಿಕೊಡುವ ಪದ:

ಕಾಲಾಡ್ ಕಪ್ಪೆ ಕಾಲಾಡ್...
ನೀರಿಗೆ ಬಿದ್ದರೆ ತೇಲಾಡ್...

ಹೀಂಗೆ ಒಬ್ಬ ಮುದಿ ಎತ್ತ್‌ನತಂದ್ ಗೋಳು ಬಂದದರ ಕತೆ ಹೇಳಿ ಮಕ್ಕಳಿಗೆ ಪದ ಹೇಳಿ ಕೊಟ್ಟವೆ.

ನಾನ್ ನೀನ್ ಸೇರಿಕಂಡ್
ಗೋಣಿಕೊಪ್ಪಕೆ ಹೋಕಂಡ್
ಮುದಿ ಎತ್ತ್‌ತಂದ್‌ಕಂಡ್
ಹಡ್ಲ್‌ಗದ್ದೆನ ಹೂಡಿಕಂಡ್
ಗೋಳು ಗೋಳು ಗೋಳಣ್ಣ.....

ಮಕ್ಕಳ ಎತ್ತಿಕಂಡ್ ಸುಮ್ಮನೆಕುದ್ದರೆ ಅವು ಮರ್ಲವೆ. ಅವರ ಎತ್ತಿ ಕಂಡ್ ಅಲ್ಲಿ ಇಲ್ಲಿ ತಿರ್‌ಗಾಡೊಕು. ಆಗ ದೊಡ್ಡವು ಆ ಕೂಸುನ ಕೈ ಹಿಡ್‌ದ್ ತಪ್ಪಾಳೆ ಕೊಟ್ಟಿಸಿ ಹಾಡ್ಸಿ ನೆಗಾಡ್ಸುವ ಪ್ರಯತ್ನ ಮಾಡುವೆ. ಆಗ ಹಾಡುವ ಪದ,

ಅಪ್ಪಿ ಅಪ್ಪಿ ಅಪ್ಪಿ...
ಅಪ್ಪಂಗೊಂದ್‌ಅಪ್ಪಿ...
ಅವ್ವಂಗೊಂದ್‌ಅಪ್ಪಿ...
ಅಣ್ಣಯ್ಯಂಗೊಂದ್‌ಅಪ್ಪಿ...
ಅಕ್ಕಯ್ಯಂಗೊಂದ್‌ಅಪ್ಪಿ...
ಬೋಜಂಗೊಂದ್‌ಅಪ್ಪಿ...
ಕೂಸಿಗೊಂದ್ ಅಪ್ಪಿ...
ಮಾಮ್...ಮಾಮ್...ಮಾಮ್.

ಓಂಗೆ ಮಾಡ್‌ಕನ ಕೂಸು ತಾನೂ ಕೈಲಿ ತಪ್ಪಾಳೆ ಕೊಟ್ಟಿ ನೆಗಾಡ್ದೆ.

ಹಾಂಗೆ ಮಕ್ಕಳಿಗೆ ಎಣ್ಣೆ ಹಾಕಿ ಮೀಸುವ ನಮ್ಮ ಪಡ್ಡಿಸ್ಲಲಿ. ಕೂಸುನ ಮೂಕುನ ಉದ್ದ ಬಾಂತ ಹೇಳಿ ಎಳ್ವವೆ. ಆಗ ಕೂಸುಗೆ ಜ್ಯಾನೆ ಆಗಿ ಮರ್ವದೆ. ಆಗ ಕೂಸುನ ಗಮನ ಬ್ಯಾರೆಕಡೆ ಹೋಗುವಂಗೆ ಮಾಡಿಕೆ ಹೀಂಗೆ ಪದ ಹೇಳಿವೆ.

ಉದ್ದ ಬಾ ಮೂಕು ಉದ್ದ ಬಾ...
ಪ್ಯಾಟೆಗೆ ಹೋಬಡ ಮೂಕು...ಇತ್ತ ಬಾ...
ಉದ್ದ ಬಾ ಮೂಕು ಉದ್ದ ಬಾ...
ಕುಂದ್ ಹತ್ತ್ ಬಡ ಮೂಕು ಇತ್ತಬಾ...
ಉದ್ದ ಬಾ ಮೂಕು ಉದ್ದ ಬಾ...
ಆಕಾಸ ನೋಡ್ಬಡ ಮೂಕು ಇತ್ತಬಾ...
ಉದ್ದ ಬಾ ಮೂಕು ಉದ್ದ ಬಾ...

ಹಾಂಗೆ ಕೂಸುನ ಮೀಸ್‌ಕನ ಹೇಳುವ ಪದ ಸನ ಇಲ್ಲಿ ಉಟ್ಟು. ಮಕ್ಕ ಮೀಸ್‌ಕನ ನೀರ್ ಬಿದ್ದಂಗೆ ಜೋರು ಮರ್ವವೆ. ಆಗ ಪದ ಹೇಳ್ತರೆ ಅತ್ತಕಿಪಿಕೊಟ್ಟು ಸುಮ್ಮನಾದವೇಂತ ಹೀಂಗೆ ಪದ ಹೇಳಿವೆ.

ಅಪ್ಪ ನೆಟ್ಟ ತೆಂಗಿನ ಮರಕೆ ನೀರ್ ಹೋಗಲಿ
ಜಿಜಿಜಿಲಾ...
ಅಪ್ಪ ನೆಟ್ಟ ಬಾಳೆ ಮರಕೆ ನೀರ್ ಹೋಗಲಿ
ಜಿಜಿಜಿಲಾ..
ಅಪ್ಪ ನೆಟ್ಟ ಮಾಯಿನ ಮರಕೆ ನೀರ್ ಹೋಗಲಿ
ಜಿಜಿಜಿಲಾ...

ಮಳೆಗಾಲಲಿ ಮನೆಲಿ ಅಪ್ಪಅವ್ವ ಮಕ್ಕ ಒಲೆಬುಡಲಿ ಕುದ್ದ್ ಬೆಂಕಿ ಕಾಸ್‌ಕನ ಕುಸೀಲಿ ಎಂತಾರ್ ಮಾತಾಡಿ ಕಂಡ್ ಕುದ್ದಿರ್‌ಕನ ಸಣ್ಣ ಮಕ್ಕಳಿಗೆ ಒಮ್ಮೊಮ್ಮೆ ಈ ಪದ ಹೇಳಿಕೊಟ್ಟವೆ.

ಈ ಕಾಲ ಮಳೆಗಾಲ ಬಾಳ
ನಮ್ಮಪ್ಪ ಒಲೆ ಬುಡಂದ ಏಳ
ಸಾಲ ಕೊಟ್ಟೋವೆಲ್ಲಾ ಬೊನ್ನೀ...
ನಮ್ಮಂಗಳ ಮೊಣ್ಣುತಿನ್ನಿ...

ಮರ್ವುವ ಮಕ್ಕಳ ಸಮಾದಾನಪಡ್ಸಿಕೆ ಅವ್ವ ಇಲ್ಲರೆ ಮನೆನ ಬ್ಯಾರೆ ಸದಸ್ಯರ್‌ಮಕ್ಕಳ ಅಂಗೈಲಿ ಬರ್ದ್, 'ಇಲ್ಲಿ...ಇಲ್ಲಿ...ಇಲ್ಲಿ...' ಅಂತ ಹೇಳಿ

ಕೂಸಿಗೆ ಕಿಕ್ಕಿಳಿ ಮಾಡಿ ನೆಗಾಡ್ಸಿವೆ.

ಸೆಗಣಿ ಕಟ್ಟೆ ಕಟ್ಟಿ, ಜಿಜ್ಜಿ ಮೀದ್
ಮೊವ್ವಕುಪ್ಪ ಹಾಕಿ, ಹಾಲನ್ನಉಂಡ್
ಮಾಮ ಮನೆಗೆ ನಡಿ ಕೂಸು...
ಮುಂದೆ ಮುಂದೆ ನೀ... ಹಿಂದೆ ಹಿಂದೆ ನಾ...
ಮಾಮನೆಗೆದಾರಿಯಾದ್... ಮಾಮನೆಗೆದಾರಿಯಾದ್...
ಇಲ್ಲಿ...ಇಲ್ಲಿ...ಇಲ್ಲಿ...ಇಲ್ಲಿ...

ಕೊಡಗು ಜಿಲ್ಲೆನ ಅರೆಬಾಸೆ ಗೌಡರ ಬಾಸಿಕ ಪರಿಸರಲಿ ಇರುವ ಈ ಮಕ್ಕಳ ಪದಗಳ ಗಮನಿಸಿರೆ ಇವು 'ಶಿಷ್ಟ ಕನ್ನಡ'ಕಿಂತ ಬ್ಯಾರೆರೂಪಲಿ ಇರುದರಕಾಂಬಕ್. ಇದ್‌ಕೆ ಇಲ್ಲಿನ ಪ್ರಾದೇಸಿಕ ಹಿನ್ನೆಲೆ ಕಾರಣ ಆಗಿರ್ದು. ಕೊಡಗ್‌ಲಿ ಬೆಳೆ ಕೆಲ್ಸ ಆದ ಮ್ಯಾಲೆ ದನಗಳ ಗದ್ದೆಗೆ ಬುಟ್ಟು ಪಾರ ಇರ್ದು ಉಟ್ಟು. ಆ ಸಂದರ್ಬ್ನ ಇಟ್ಟ್‌ಕಂಡ್ ಒಂದ್ ಪದ. ಅಂಗಳಲಿ ಇದ್ದ ಕೋಳಿ ಪಿಳ್ಳೆಗಳ ಗಿಡ್‌ಗ ಹಾರಿ ಬಂದ್ ಹೊತ್ತ್‌ಕಂಡ್ ಹೋಗುವ ಕ್ರಿಯೆಗೆ ಸಂಬಂದಪಟ್ಟಂಗೆ ಒಂದ್ ಪದ. ಕೊಡಗ್‌ಲಿ ಯಾಗೋಳು ಬೆಳಿಗ್ಗೆ ಉಂಬಕೆ ರೊಟ್ಟಿ ಮಾಡುವ ಚಟುವಟಿಕೆ ಉಟ್ಟು. ಅದರ ಮಕ್ಕಳೂ ನೋಡಿದ್ದವೆ. ಹಾಂಗೆ 'ಅಪ್ಪಿಅಪ್ಪಿ' ಪದ ಹೇಳಿ ಕೂಸಿಗೆ ಕಲ್ಸಿದೊ. ಹಾಂಗೆ ಬೂಮಿ ನೆಡುವ ಕೃಸಿಕರಾದ ಇವರ ಬೊದ್ಕ್‌ಲಿ ಗದ್ದೆ ನೆಡ್ದು, ಅದ್ ನೆಡದೆ ಹಾಂಗೆ ಬುಟ್ಟರೆ ಹಡ್ಲ್ ಬಿದ್ದದೆ. ಹಡ್ಲ್ ಬಿದ್ದ ಗದ್ದೆನ ಹೂಡಿಕೆ ಒಳ್ಳೆ ಎತ್ತ್ ಬೇಕ್. ಅದ್ಕಾಗಿ ಒಬ್ಬ ಗೋಣಿಕೊಪ್ಪಂದ ದುಡ್ಡು ಕಮ್ಮಿ ಕೊಟ್ಟು ಮುದಿ ಎತ್ತ್‌ನ ತಂದ್ ಗದ್ದೆನ ಹೂಡಿಕಾಗದೆ ಗೋಳು ಬಾತ್‌ಂತ ಪದ ಮಾಡಿಕೊಟ್ಟೊ.

ಹಾಂಗೆ ಕೊಡಗ್‌ನ ಮಳೆನ ಹೊಡೆತಂದ ಯಾರೂ ಮನೆಂದ ಹೊರಗೆ ಹೋಕೆ ಆಗದಂತ ಮತ್ತೆ ಕೆಲ್ಸ ಮಾಡಿಕೆ ಆಗದಂತ ಪರಿಸ್ತಿತಿನ ತಿಳ್ಸುವ ಒಂದ್‌ಪದ. ಹೆಣ್ಣಿಗೆ ಅಪ್ಪನ ಮನೆ ವಿಸೇಸ. ಕೂಸು ಹೆಣ್ಣಾಗಲಿ ಗಂಡಾಗಲಿ. ಅದ್ ಹುಟ್ಟಿದರ್‌ಂದ ಒಡ್‌ದ್ ಮೊದ್ವೆಗೆ ಮುಟ್ಟ ನಡೆವ ಆ ಕೂಸುನ ಯಾವುದೇ ಜಂಬರಲಿ ಸೋದರಮಾಂವ ಇದ್ದೇ ಇರೋಕು. ಕೂಸಿಗೆ ಮಾಮನೆಗೆ ಹೋದು ಎಲ್ಲಿಲ್ಲದ ಕುಸೀನ ವಿಸಯ. ಮಾವನ ಮನೆ ಕೂಸುನ ಬಾಸೆಲಿ ಸಂಕ್ಷಿಪ್ತ ಆಗಿ ಮಾಮನೆ ಆಗಿ ಬಳಕೆ ಆದೆ. ಹಂಗೆ ಕೂಸುನ ಅಪ್ಪಂಗೂ ಯಾಗೋಳು ಅದರ ಅಪ್ಪನ ಮನೆಕಡೆ

ಗ್ಯಾನ ಇದ್ದದೆ. ಹಾಂಗೆ ಅವ್ವ ಅವ್ವನ ಮನೆನ ಗ್ಯಾನ ಮಾಡಿಕಂಡ್ ತನ್ನ ಕೂಸಿಗೆ ಮಾವನ ಮನೆಗೆ ಹೊಸ ಕುಪ್ಪ ಹಾಕಿ ಪೋಯಿಂತ, ದಾರಿಸ ಹುಡುಕುವಂಗೆ ಕೂಸಿಗೆ ಕಿಕ್ಕಿಳಿ ಮಾಡಿ ನೆಗಾಡ್ಸಿ ತಾನೂ ಕುಸಿಪಟ್ಟದೆ. ಮತ್ತೆ ಕೊಡಗ್‌ನ ಪರಿಸರಲಿ ನಾವ್ಗೆ ಗೊತ್ತಿರುವಂಗೆ ಗಿಡಮರ ತೋಟದ ಮದ್ಯನೇ ಮನೆ ಇದ್ದದೆ. ಮನೆ ಹಿಂದೆ ಮುಂದೆ ಬ್ಯಾರೆ ಬ್ಯಾರೆ ಹಣ್ಣ್‌ನ ಮರಗ ಇದ್ದವೆ. ಮನೆ ಹಿಂದೆ ಬದಿಲಿ ಮುಕ್ಕಾಲ್ ಮಡ್ಗಿ ಕಾಲ್ ನೀಂಡಿ ಕುದ್ದ್, ನೀಂಡಿದ ಕಾಲ್ ಮ್ಯಾಲೆ ಕೂಸುನ ಮಲ್ಗಿಸಿ ಕಂಡ್ ಮೀಸುವೆ. ಇದ್ ನಮ್ಮಲ್ಲಿ ಕೂಸುನ ಮೀಸುವ ಕ್ರಿಯೆ. ಹಾಂಗೆ ಮೀಸ್‌ಕನ ಕೂಸು ಮರ್‍ಡಿಕಾಗದ್‌ಂತ ಹೇಳಿ ಒಂದೊಂದು ಚೊಂಬು ನೀರ್ ಹೊಯ್ಯಕನ ಅಲ್ಲಿರುವ ಮರಗಳ ಹೆಸ್‌ರ್ ಹೇಳಿ ನೀರ್ ಹೊಯ್ದ್ ಹಾಡಿ ಮೀಸುವ ಇಲ್ಲಿನ ಒಂದ್ ಕ್ರಿಯೆ ಮಕ್ಕಳ ಪದಗಳಲಿ ಬಳಕೆಗೆ ಬಾತ್.

ಹೀಂಗೆ ಒಟ್ಟು ಗಮನಿಸಿರೆ ಕೊಡಗು ಅರೆಬಾಸೆಗೌಡರ ಬಾಸಿಕ ನೆಲೆಲಿ ಕೂಸುನ ಬಾಸೆನೂ ಇತರ ಬಾಸೆಗಳ ಕೂಸುನ ಬಾಸೆಲಿರುವ ಸಬ್ದಗಳ ಹೊಂದಿದ್ದರೂ ತನ್ನದೇ ಆದ ವಿಸಿಸ್ಟ ರೂಪಗಳ ಪಡ್‌ಕಂಡ್ ಉಟ್ಟು. ಅಲ್ಲಿನ ಕೂಸುನ ಬಾಸೆಲಿ ಇರುವ ಸಬ್ದಗ, ಪದಗ ಅಲ್ಲಿನ ಬೌಗೋಳಿಕ ಪರಿಸರ, ಸಾಮಾಜಿಕ ಜೀವನ ಇದರ ಬಾಗನೇ ಆಗಿ ಉಟ್ಟು. ಕೂಸುನ ಬಾಸೆ ಬರೀ ಮಕ್ಕಳೊಟ್ಟಿಗೆ ಮಾತಾಡುವ ಒಂದ್ ಬಾಸೆ ಆಗಿರದೆ ಆ ಕೂಸಿಗೆ ತಾನ್ ಬೊದ್ಕುವ ಪರಿಸರನ ಪರಿಚಯ ಮಾಡಿಕೊಟ್ಟದೆ. ತಾನ್ ಬೆಳೆವ ವಲಯನ ಪರಿಚಯ ಮಾಡಿಕೊಟ್ಟದೆ. ಆ ವಲಯಲಿ ತನ್ನ ಪಾತ್ರ ಏನ್‌ಂತ ಮತ್ತೆ ಅದನ ತಾನ್ ಹೇಂಗೆ ನಿಬಾಯಿಸೋಕು ಅಂತಕಲ್ಸಿದೆ. ಒಟ್ಟಾರೆ ಕೊಡಗು ಅರೆಬಾಸೆ ಗೌಡರ ಕೂಸುನ ಬಾಸೆ ಬ್ಯಾರೆ ಬಾಸೆಗಳಿಗಿಂತ ಬಿನ್ನ ಆಗಿ ಅದರ್ದೇ ಆದ ವಿಸೇಸತೆನ ಪಡ್ಕಂಡಿರುದರ ಕಾಂಬಕ್.

---

**ಡಾ. ಲಾವಣ್ಯ ಸಿ.ಪಿ. ಕೊಟ್ಟಕೇರಿಯನ**
ಸಹಾಯಕ ಪ್ರಾಧ್ಯಾಪಕರು,
ಶೇಷಾದ್ರಿಪುರಂ ಪದವಿ ಕಾಲೇಜು, ಮೈಸೂರು.
ಮೊಬೈಲ್ ಸಂಖ್ಯೆ : 9481431067




# ಮೋರೆ ಮುಚ್ಚಿಕಂಡ್ ಓಡಾಡುವಾಂಗೆ ಆತಲೇ!?



● ಪಿ.ಜಿ. ಅಂಬೆಕಲ್

ಮೋರೆ ಮುಚ್ಚಿಕಂಡ್ ಓಡಾಡುವಾಂಗೆ ಇಂವಂಗೆ ಏನಾತ್? ಕೊಲೆ, ದರೋಡೆ ಏನಾರ್ ಮಾಡ್ಯುಟ್ಟಾಂತ ತಲೆ ಕೆರ್ಕಂಬೇಡಿ. ಕೊರೊನಾ ಬಂದ್ ಮೋರೆ ಮುಚ್ಚಿಕಂಡ್ ಓಡಾಡುವಾಂಗೆ ಆದ್ದ್ ಅಸ್ಟೆ! ಆಸ್ಪತ್ರೆಗಳ್ಲಿ ಆಪರ್ಸನ್ ಮಾಡ್ಕನ ಡಾಕ್ಟ್ರ್ಗ, ನರ್ಸ್ಗ, ವಿಜ್ಞಾನಿಗ ಪ್ರಯೋಗ ಸಾಲೆಗಳ್ಲಿ ಹಾಕಣ್ತಿರುವ ಮೋರೆ ಗವುಸು ಅತ್ತಾ ಈಗ ಎಲ್ಲವ್ರ ಹೇಳುವಾಂಗೆ ಮಾಸ್ಕ್ ಈಗ ಎಲ್ಲವುಕು ಬಂದುಟು. ಈ ಮಾಸ್ಕ್ ಇಲ್ಲದೆ ಮನೆಂದ ಹೊರ್‌ಡುವಾಂಗೆನೇ ಇಲ್ಲೆ. ಒಂದುವರೆ ಎರ್ಡ್ ವರ್ಸದ ಕೂಸುಗ ಕೂಡಾ ಮಾಸ್ ಮಾಸ್ ಬೇಕೂಂತ ಹೇಳುವಾಂಗೆ ಆಗುಟ್ಟು.

ಈ ಮಾಸ್ಕ್‌ಂದಾಗಿ ಕೆಲವರ ಗುರ್ತವೇ ಸಿಕ್ಕುದುಲೆ. ಯಾರ್‌ಂತ ಕಣ್ಣ್ ಪಿಳಿ ಪಿಳಿ ಮಾಡಿ ನೋಡ್ಕನ ಈ ಮೊಯಿಸಂಗೆ ಗುರ್ತ ಸಿಕ್ಕಿತ್ಲೇಂತ ಮಾಸ್ಕ್ ಜಾರ್ಸಿ ಮೋರೆ ತೋರ್ಸೋಕಾದೆ. ದಾರಿಲಿ ಹೋಕನ ಎದ್ರ್ ಸಿಕ್ಕಿದಂವ ನೋಡಿ ನೆಗಾಡ್ತಾ? ಮೋರೆ ತಿರ್‌ಂಟಿಸಿತಾ?ಂತ ಹೇಳ್ತಾ ಒಂದೂ ಗೊತ್ತೇ ಆದುಲೆ. ಅಂವನ ಮೇಲೆ ಸಿಟ್ಟ್‌ಲಿ ಕಾಂಕ್‌ರ್ಸಿ ಉಗಿವ ಹಾಂಗೂ ಇಲ್ಲೆ. ಬಾನ ನೋಡಿ ಉಗ್ದರೆ ತನ್ನ ಮೋರಗೇ ಬೀಳ್ದೂಂತ ಹೇಳುವಾಂಗೆ, ಉಗ್ಟರೆ ಮಾಸ್ಕ್ ಒಳಗೇ ನಮ್ಮ ಮೋರೆ, ಮೀಸೆಗೇ ಅಂಟಿಕಂಬೊದು. ಈಗ ಮೂಕುಗೂ ಹೆಚ್ಚಿ ಕೆಲ್ಸ ಇಲ್ಲೆ. ಪಾರ್ಕ್‌ಲಿ ತಿರ್ಗಾಡ್ಕನ ಹೂಗಳ ಪರ್ಮಳನೂ ಬಾದುಲ್ಲೆ. ಚರಂಡಿನ ನಾತನೂ ಗೊತ್ತಾದುಲ್ಲೆ. ಸೀತ ಗೀತ ಆದರೆ ಅದರೊಳಗೇ ಸೀನೊಕು. ನೆಗ್ಡಿನ ಮೇಲೆ ಎಳ್ದ್ ಸ್ಟಾಕ್ ಮಾಡಿಕಣೊಕು. ಕಪನ, ಗುಟ್ಕನ ನುಂಗಿಕಣಕು. ನಾವು ಬುಟ್ಟ ಉಸುರುನ ನಾವೇ ಎಳ್ಕಣಕು. ಹೊರೆಗೆನ ಸುದ್ದ ಗಾಳಿನ ಉಸುರಾಡುವಾಂಗೇ ಇಲ್ಲೆ. ಈ ಮಾಸ್ಕ್‌ಂದಾಗಿ

ಸೀನಣ್ಣಂದವರಿಗೆ, ಗಣಿಗಾರಿಕೆಯವುಕೆ ತುಂಬಾನೆ ಕಸ್ಟ!?

ಈಗೆಲ್ಲಾ ಮಾಸ್ಕ್ ಹಾಕಣದೆ ಎಲ್ಲೂ ಹೊರೆಗೆ ಹೋಕೇ ಜೊತ್ತಲೆ! ಇದ್ ಜಾರೀ ಕಸ್ಟ ಕಾಂಜೊದು ಗೂಡೆಗಳಿಗೆ. ಅವು ಮಾಡ್ಟ ಮೇಕಪ್, ಲಿಪ್ಟಿಕ್ ಒಂದೂ ಕಾಂಜೊದೇ ಇಲ್ಲಲೆ. ಕೆಲವು ಗೂಡೆಗ ಹೋಗಿ ಮಾಸ್ಕ್ ಮಾರವರೊಟ್ಟಿಗೆ ತುಟಿ ಕಾಂಬಂತ ಮಾಸ್ಕ್ ಉಟ್ಟೋಂತ ಕೇಳ್ಟೊಗಡ! ಇನ್ನು ಅವರ ಜೂಡಿಗೋ, ಹಾಕುವ ಜೋಡಿಗೋ ಮ್ಯಾಚ್ ಆಗುವ ಮಾಸ್ಕ್‌ಗ ಕೂಡಾ ಈಗ ಮಾರ್ಕೇಟಿಗೆ ಬಂದುಟುಗಡ! ಈಗ ಮಾಸ್ಕ್‌ಗಳ್ದೇ ಜೋರು ಯಾಪಾರ. ಇಪ್ಪತ್ತ್ ರೂಪಾಯಿಂದ ಐನೂರು, ಸಾವ್ರ ರೂಪಾಯಿವರೆಗೂ ಮಾಸ್ಕ್‌ಗ ಉಟ್ಟುಗಡ! ಕೆಲವರ ಮಾಸ್ಕ್‌ಲಿ ವೆಂಟಿಲೇಟರ್ ನಾಂಗೂ ಪಿನೋ ಒಟ್ಟೆಗ ಉಟ್ಟು. ಒಟ್ಟಾರೆ ತರಾವರಿ ಬಣ್ಣ ಬಣ್ಣದ ಮಾಸ್ಕ್‌ಗಳೇ ಮಾಸ್ಕ್‌ಗ! ಈಗೀಗ ಬೆಳ್ಳಿನ, ಚಿನ್ನದ ಮಾಸ್ಕ್‌ಗಳನೂ ತಯಾರ್ ಮಾಡಿಕೆ ಸುರುಮಾಡಿಯೊಳೊಂತ ಸುದ್ದಿ ಉಟ್ಟು! ಈ ಮಾಸ್ಕ್ ಹಾಕಾಟಂದಾಗಿ ಗುಲಾಬಿ ಬಣ್ಣದ ಕೆನ್ನೆ, ತೊಂಡೆಹಣ್ಣ್ ನಾಂಗೆನ ತುಟಿ, ಸಂಪಿಗೆ ಮುಗುಟುನಾಂಗೆನ ಮೂಕು, ಮಲ್ಲಿಗೆ ಮುಗುಟುನಾಂಗೆ ಹಲ್ಲ್‌ಗಂತ ಗೂಡೆಗಳ ವರ್ಣಿಸುವ ಕವಿಗೆಲ್ಲಾ ಸುಮ್ಮನೆ ಅವರ ಮಾಸ್ಕ್‌ನ ಬಣ್ಣಗಳನೇ ನೋಡಿಕಾಗುಟ್ಟು!

ಮಾಸ್ಕ್ ಹಾಕುದರ ಬಗ್ಗೆ ಸರ್ಕಾರಂದ ದಿನಕೊಂದು ಕಾನೂನು! ಬೈಕ್, ಕಾರ್ಲಿ ಒಬ್ಬನೇ ಹೋಕನ ಮಾಸ್ಕ್ ಹಾಕೊಕೂಂತ ಇಲ್ಲೇಂತ ಒಮ್ಮೆ ಹೇಳ್ರೆ, ಮರ್ ದಿನ ಒಬ್ಬನೇ ಇರ್ಲಿ ಅರ್ದನೇ ಇರ್ಲಿ ಮಾಸ್ಕ್ ಹಾಕೊಕೇಂತ ರೂಲ್ಸ್. ಮಾಸ್ಕ್ ಹಾಕದವುಕೆ ಸಾವ್ರ ರೂಪಾಯಿ ದಂಡ ಇದ್ದದ್ ಮತ್ತೆ ಇನ್ನೂರ ಐವತ್ತಕ್ಕೆ ಇಳ್ತ್! ಅಂತೂ ಇಂತೂ ದುಡ್ಡು ಮಾಡೊವ್ಕೆ ಒಂದು ದಾರಿ ಅಸ್ಟೆ!? ಇನ್ನು ಮಾಸ್ಕ್ ಹಾಕುವ ಜನರೋ, ಕೆಲವು ಜನ ಮಾಸ್ಕ್ ಮೋರೆಗೆ ಬಿಗ್ದ್ ಬೊಳ್ಬುಗೆ ಹೊರ್ಟರೆ ಬಿಂಜೊತ್ತ್ ಮನೆಗೆ ಬಾಕನ ಮುಟ್ಟ ಹಂಗೇ ಇದ್ದದೆ. ಅವು ಬುಟ್ಟ ಉಸುರ್ನೇ ಉಸುರಾಡಿ ಉಸುರಾಡಿ ಸರೀರಲಿ ಆಮ್ಲ ಜನಕದ ಕೊರ್ತೆಂದದ ಆಸ್ಪತ್ರೆಗೂ ಸೇರೊವು ಒಳೊ. ಇನ್ನು ಕೆಲವು ಕೊರೊನಾಕ್ಕೆ ಹೆದ್ರಿ ಮನೆಬಾಗ್ಲ್‌ಗೆ ರಂಗೋಲಿ ಹಾಕ್ಕನೂ ಮಾಸ್ಕ್ ಬಿಗ್ದ್ ಕಂಡೇ ಇದ್ದವೆ. ಮನೆ ಜಗ್ಲಿಲಿ ಒಪ್ಪ್ಯಾಡ್ಕನೂ ಮಾಸ್ಕ್! ಅಂಗಳಲಿರುವ ಹೂಗಳ ಕೊಯ್ಯ್ಕನೂ ಮಾಸ್ಕ್! ಹಳ್ಳಿಗಳ್ಲೂ ಒಬ್ಬನೇ ತೋಟಕೆ ಹೋಕನೂ, ಅಜೀಬ ತಿಗಾರ್ಡ್ಕನೂ ಮಾಸ್ಕೇ ಮಾಸ್ಕ್! ಈ ಮಾಸ್ಕ್‌ಗಳ ಹಾಕಿ ಹಾಕಿ ಕೆಲವರ ಮೂಂಕು ಚಪ್ಪ ಆಗುಟು! ಮೋರೆ ಮಾಸ್ಕ್‌ನಸ್ಟಗಲ ಚೀನದವರ ಮೂತಿನಾಂಗೆ ಕೆಂಪಾಗುಟ್ಟು! ಬೀಸುವ ಗಾಳಿಲಿ ವೈರಾಣು ಇರ್ದುಲೇಂತ ತಿಳ್ದವು ಹೇಳ್ರೊ ಮೊಂಬುಸಂಗೆ ಈ ಕೊರನದ ಹೆದ್ರಿಕೆ ತಲೆಗೆ ಅತ್ತಿ ಹೋಗುಟು. ಈಗನ ಮೊದುವೆಗಳ್ಲಿ ಭಟ್ಟ್

ಮಂತ್ರ ಎಲ್ಲಾ ಹೇಳಿ ಆಕೇರಿಗೆ ನವದಂಪತಿಗ ಇಬ್ಬರೂ ಮಾಸ್ಕ್ ಹಾಕುದು ಕಡ್ಡಾಯ, ಸಾಮಾಜಿಕ ಅಂತರ ಕಾಪಾಡಿಕಣಕೂಂತ ಉಪದೇಸಮಾಡುವೇಂತ ಜನ ತಮಾಸೆ ಮಾಡುವೆ!

ಇನ್ನು ಕೆಲವು ಪಡ್ಡೆ ಹೈದಂಗಳಿಗೆ ಬಿಸಾತೇಯಿಲ್ಲೆ. ಅಂಗಡಿಗೆ ಹೋಕನೂ ಮಾಸ್ಕ್ ಇಲ್ಲೆ. ಬೈಕ್ಲಿ ಮೂರು ನಾಕ್ ಜನ ಮೇಲೆ ಮೇಲೆ ಬಿದ್ದ್ ಕಂಡ್ ಹೋದ್ರೂ ಮಾಸ್ಕ್ ಇಲ್ಲೆ. ಮಾರ್ಕೇಟಿಗೆ ಜನಜುಂಗುಳಿಲಿ ಹೋದರೂ ಮಾಸ್ಕ್ ಇಲ್ಲದ ಬಿರ್ಸರೂ ಒಳೊ. ಇನ್ನು ರಾಜಕಾರಣಿಗ ಬಂದರೆ ಕೇಳೊಕೊ ಅವರ ಬಾಲಹಿಡಿಯುವುಕೆ ಯಾವ ಕಾನೂನೂ ಲಗಾವು ಇಲ್ಲೆ. ಹುಳುಹುಪ್ಪಟೆಗೆ ನೆಳ ಮುತ್ತಿಕಂಡಾಂಗೆ ಮುತ್ತಿಕಂಡವೆ. ಪ್ರಡಾರಿಗಳ ಮಕ್ಕಳ, ಚಿಕ್ಕಿಕಳ ಮೊದುವೆಗಿದುವೆ ಇದ್ದರಂತೂ ಕೇಳ್ಬೇ ಬೇಡ ಮಾಸ್ಕೂ ಇಲ್ಲೆ ಅಂತರನೂ ಇಲ್ಲೆ ಬೆಂತರನೂ ಇಲ್ಲೆ .ದೇವ್ರೇ ಕಾಪಾಡೊಕು.

ಈ ಮಾಸ್ಕ್‌ಂದ ಕೆಲವು ಜನಕೆ ಒಳ್ಳೆ ಉಪಕಾರನೂ ಉಟ್ಟು. ಯಾರಿಗಾರ್ ಸಾಲಕೊಡಿಕೆ ಇದ್ದರೆ ಅವು ಬಾದು ಕಂಡಾಂಗೇ ಮೋರೆ ಒಂಚೂರೂ ಕಾಣದಾಂಗೆ ಮಾಸ್ಕ್ ನೊಟ್ಟಿಗೆ ಟುವಾಲ್ನೋ. ಮಫ್ಲರ್ನೋ ಸುತ್ತಿಕಂಡರೆ ಆತ್ ಗುರ್ತೇ ಸಿಕ್ಕುದುಲೆ. ಈ ಲಾಕ್ ಡೌನ್ ಎಲ್ಲಾ ಮುಗ್ದ್ ಹಂಡದಂಗ್ಲಿ, ವೈನ್ಶಾಪ್ ಎಲ್ಲಾ ಓಪನ್ ಮಾಡುವೇಂತ ಹೇಳ್ದೇ ಹೇಳ್ದ್ ಬೆಳ್ಗಿರಿಗೆ ನಾಕ್ ಗಂಟೆಂದಲೇ ಕ್ಯೂವೇ ಕ್ಯೂ!? ಅಪ್ಪಂಗೆ ಮಕ್ಕಳಿಗೆಲ್ಲಾ ಎಣ್ಣೆ ಹಾಕುವ ಅಭ್ಯಸ ಇದ್ದದಲೇ. ಮಕ್ಕ ಅಪ್ಪನೆದ್ರ ದೊಡ್ಡ ಸುಬಗರ್ ಅವು ಅದರ ಮುಟ್ಟುದೇ ಇಲ್ಲೆ! ಜೋಸ್ತಿಗಳೊಟ್ಟಿಗೆ ಮಾತ್ರ ಪಾರ್ಟಿ ಮಾಡ್ದು. ಅಂದ್ ಅಪ್ಪ ನಿತ್ತ್‌ಕಂಡಿದ್ದ ಕ್ಯೂಗೇ ಮಂಜನೂ ಹೋತ್! ಅಪ್ಪನ ಕಂಡ್ ಮಂಜ ತಲೆಂದ ಕುತ್ತಿಗೆ ಮುಟ್ಟ ಕಣ್ಣ್ ಮಾತ್ರ ಕಾಂಬಹಾಂಗೆ ಮಫ್ಲರ್ ಸುತ್ತಿಕಂಡ್ ಯಾಪಾರ ಮಾಡಿಯೇ ಬುಟ್ಟಿತ್! ಈಗನ ಗೂಡೆಗ ಏನೂ ಕಮ್ಮಿ ಇಲ್ಲೆ. ಅವುಕೆ ಬುಡಾವಾಕ ಸುಲ್ಲ ಅವರ ಮೇಲ್ ಉಟ್ಟಲೆ ಅದ್ ಬಹು ಉಪಯೋಗಿ ತಲೆ ಮರ್ಸಿಕಣೊಕೆ ದೊಡ್ಡ ಮಾಸ್ಕ್ ಎಳ್ದ್ ಮೋರೆ ಅದಸ್ಟ್ ಮುಚ್ಚಿಕಂಡ್ ವೇಲ್ನ ಸುತ್ತಿಕಂಡರೆ ಬುರ್ಕ ಹಾಕಿದಾಂಗೆ ಯಾರ್‌ಂತ ಹೆತ್ತ ಅಪ್ಪಂಗೂ ಗೊತ್ತೇ ಆಕಿಲ್ಲೆ! ಅಂತೂ ಈ ಮಾಸ್ಕ್ ಬಂದ್ ಕೊರೊನಾಂದ ಬಚಾವ್ ಆದಾಂಗೆ ಏನೇನೋ ಕಸ್ಟಗ ಪರಿಯಾರನೂ ಆದೊ. ಅಂತೂ ಮಾಸ್ಕೇ ಮಾಸ್ಕ್ ಎಲ್ಲೆಲ್ಲೂ ಮಾಸ್ಕ್!!!

---

**ಪಿ.ಜಿ. ಅಂಬೆಕಲ್**

ವಿಶ್ವಾಸ್ ಡ್ಯಾಫೋಡಿಲ್ಸ್. # 203.ರಾಮಚಂದ್ರಪುರ. ಅಂಚೆ:- ಜಾಲಹಳ್ಳಿ.

ಬೆಂಗಳೂರು – 560013. ಮೊ.ಸಂ. 9481390089.



# ರೋಗ ನಿರೋಧಕ ಸಕ್ತಿ ಹೆಚ್ಚಿಸುದು ಹೇಂಗೆ?



ಡಾ. ನಿವೇದಿತಾ ಎ.ಪಿ.

ಈಗನ ಮೊನ್ಸರ 'ಜೀವನ ಶೈಲಿ' ತಿಂಬ ಆಹಾರಗಳ್‌ಂದ ಆಗಾಗ ಒಂದಲ್ಲ ಒಂದು ಕಾಯಿಲೆಗ ಬರ್ತಾನೆ ಇದ್ದವೆ. ಇದಕ್ಕೆ ಮುಖ್ಯ ಕಾರಣ ನಮ್ಮ ಸರ್ರಲಿ 'ರೋಗ ನಿರೋಧಕ ಸಕ್ತಿ' ಇಲ್ಲದಿರ್ದು. ಈ ರೋಗ ನಿರೋಧಕ ಸಕ್ತಿಂತ ಹೇಳ್ರೆ ನಮ್ಮ ಸರ್ರಕ್ಕೆ ಜೀವದ ಜೋಸ್ತಿ ಇದ್ದಹಾಂಗೆ. ಬ್ಯಾಕ್ಟೀರಿಯ, ವೈರಸ್ ಹೀಂಗೆನ ತುಂಬಾ ಸೂಕ್ಷ್ಮಜೀವಿಗಳ್‌ಂದ ನಮ್ಮ ಸರ್ರನ ಕಾಪಾಡಿಕೆ ಸಾಯ ಮಾಡ್ದೆ.

ನಮ್ಮ ನೆತ್ರ್‌ಲಿ ಇರ್ವ ನೆತ್ರ್ ಕಣಗಳ ಆದಾರದ ಮೇಲೆ ಈ ರೋಗ ನಿರೋಧಕ ಸಕ್ತಿ ಕೆಲ್ಸ ಮಾಡ್ದೆ. ಹಂಗಾಗಿ ಯಾವ್ದೇ ಸೋಂಕು ಸೋಂಕ್‌ಕನ ಪ್ರತಿ ಮೊನ್ಸನಲಿ ಆವ ಲಕ್ಸಣಗಳ ತೀವ್ರತೆ ಬೇರೆ ಬೇರೆ ಇದ್ದದೆ.

ರೋಗ ನಿರೋಧಕ ಸಕ್ತಿ ಕಮ್ಮಿ ಇದ್ದರೆ ಈ ಕಾಗಡೆನ ಲಕ್ಸಣಗ

ಕಂಡದೆ:-

1. ಆಗಾಗ ಸೀತ, ಕೆಮ್ಮು, ನೆಗ್ಗಿ ಹೀಂಗೆನ ಸೋಂಕುಗೆ ಒಳಗಾದು, ಮತ್ತೆ ಬೇಗ ವಾಸಿಯಾಗದೆ ಇರ್ದು.
2. ಯಾಗೊಳು ಅಲರ್ಜಿ ಹಾಂಗೆನ ಚರ್ಮ ರೋಗಗ ಬಾದು.
3. ಯಾಗೊಳು ಅಜೀರ್ಣದ ಸಮಸ್ಯೆಂದ ಕಸ್ಟ ಪಡ್ದು. ಅದರೊಟ್ಟಿಗೆ ಆಮ್ಲೀಯತೆ (ಆಸಿಡಿಟಿ), ಹೊರಗೆ ಸರಿಯಾಗಿ ಹೋಗದೆ ಇರ್ದು ಇಲ್ಲರೆ ಉರ್ಚಟ, ಕಕ್ಕುದು ಹೀಂಗೆ.
4. ತಲೆಕೂದ್ಲು ಉದುರುದು.
5. ಬಾಳ ಆಲಸ್ಯ. ಬೊಚ್ಚೆಲ್‌ಗಳ್‌ಂದ ದಿನದ ಕೆಲ್ಸಗಳ್ಲಿ ವೆತ್ತೆಸ.
6. ನಿದ್ದೆ ಸೆರಿ ಬಾರದೆ ಇರ್ದು, ಖಿನ್ನತೆ.

ಪ್ರತಿ ಸರ್ತಿ ಯಾವುದೇ ಸೋಂಕು ಸೋಂಕ್‌ಕನ ಗಾಬರಿ ಆಗದೆ ಈ ಕಾಗಡೆ ಕೊಟ್ಟ ತಿಳ್ವಳಿಕೆನ ಅಳವಡ್ಸಿಕಂಡರೆ ನೈಸರ್ಗಿಕ ಆಗಿ ರೋಗ ನಿರೋಧಕ ಸಕ್ತಿ ಹೆಚ್ಚಾದೆ.

ಮೊಸ್ಲಂಗೆ ಬಾವ ಜೆರ ಒಂದು 'ಅಬಾಧಿತ ಪ್ರತಿಕ್ರಿಯೆ' (Immune response) ಆಗುಟ್ಟು. ಜೆರ ಬಾಕನ ಸರ್ರ ತನ್ನದೇ ಆದ ರೀತಿಲಿ ಸೋಂಕುಂದ ರಕ್ಸಿಸಿಕಣಿಕೆ ಪ್ರಯತ್ನ ಪಟ್ಟದೆ. ಸರ್ರಕ್ಕೆ ಸಾಯ ಮಾಡುವ ನೆತ್ರ್ ಕಣಗ ಚುರ್ಕಾಕೆ (activate) ಜೆರ ಸಾಯ ಮಾಡ್ದೆ.

ಜೆರ ಬಾಕನ ಈ ಕಾಗಡೆನಾಂಗೆ ಮಾಡಿ:-

1. ಬಿಸಿ ನೀರ್ನ ಕುಡಿದು.
2. ಹೊಟ್ಟೆ ಹಸಿಯಕನ ಮಾತ್ರ ಸುಲ್ಬಲಿ ಅರ್ಗುವ ಆಹಾರನ ತಕಂದು. ಸುಲ್ಬಲಿ ಅರ್ಗುವ ಆಹಾರಗ:- ಗಂಜಿ (ಅಕ್ಕಿ / ಗೋದಿದ್) ಕಿಚ್ಡಿ, ಬೇಸಿದ ಪದ್‌ಂಜಿ, ಸೆಟ್ಟಿಕಾಯಿಗಳ ಸೂಪ್

ಈ ಕಾಗಡೆನ ಆಹಾರಗಳ್‌ಂದ ಸೋಂಕು ಕಮ್ಮಿ ಆಕನ ಮುಟ್ಟ ದೂರ ಇರೊಕು:-

1. ಎಣ್ಣೆಲಿ ಕಾಸಿದ, ಬೇಸಿದ ತಿಂಡಿ ತಿನ್ಸ್‌ಗ
2. ಹಾಲ್, ಮೊಸುರು, ಬೆಣ್ಣೆ, ತುಪ್ಪ.

ಸ್ವಾಸಕೋಸಕ್ಕೆ ಸಂಬಂದಪಟ್ಟ ಕಾಯಿಲೆಗ ಇದ್ದರೆ :-

ಹಣ್ಣ್‌ಗ, ಜ್ಯೂಸ್‌ಗ, ಬೆಂಡ, ಮಿಲ್ಕ್ ಸೇಕ್‌ಗ, ಬ್ರೆಡ್, ಒಣ್ಗಿಸಿದ ಹಣ್ಣ್‌ಗಳ ತಿಂಬಕೆ ಆಗದ್.

ಆರೋಗ್ಯಲಿ ಇರ್ಕನಸೂ ಈ ಕಾಗಡೆನ ವಿಸಯುಗಳ ನೆನ್ಪುಲಿ ಇಸಿಕಣೊಕು:–

'ಸಮತೋಲಿನ' ಆಹಾರ ತಕಣಕು. 'ಸಮತೋಲಿನ' ಆಹಾರಂತ ಹೇಳ್ರೆ ಪ್ರತಿ ಒಬ್ಬನ ಸರ್ರ ಪ್ರಕೃತಿ, ದೋಸ, ಪ್ರಕೋಪ, ಸರ್ರದ ತೂಕ ಹಿಂಗೆನ ವಿಸಯುಗಳ ನೆನ್ಪುಲಿ ಇಸಿಕಂಡ್ ನಿರ್ದಾರ ಮಾಡೊಕಾದೆ.

ಯಾಕೇಂತ ಹೇಳ್ರೆ ಪ್ರತಿಯೊಬ್ಬನ ಸ್ವರವೂ ಬೇರೆ ಬೇರೆ.

ಕೆಲವುಕೆ ಸ್ವಾಸಕೋಸಕ್ಕೆ ಸಂಬಂದಪಟ್ಟ ಕಾಯಿಲೆಗ ಇದ್ದರೆ ಆಗಾಗ ಉಸ್ರಾಡುವ ತೊಂದರೆ, ಕೆಮ್ಮು, ಕಫ ಹಿಂಗೆನ ಕಾಯಿಲೆಗ ಬಂದ್ಕಂಡಿದ್ದರೆ ಹಣ್ಣ್‌ಗ, ಹಸಿನೆಟ್ಟಕಾಯಿಗ, ಮೊಸ್ರು, ಸಲಾಡ್‌ಗ ಎಲ್ಲಾ ಕಾಯಿಲೆ ಹುಟ್ಟುಸುವ ಕಾರಣಗಾದೆ. (Triggering factor)

ಇನ್ನು ಕೆಲವುಕೆ ಪಿತ್ತ ದೋಸಂದ ಬಾವ ಕಾಯಿಲೆಗ ಬಂದ್ಕಂಡಿದ್ದರೆ, ಚರ್ಮದ ಕಾಯಿಲೆಗ, ಮೈಗ್ರೇನ್‌ಹಿ ತಲೆಬೇನೆ, ಆಮ್ಲೀಯತೆ, ಕಕ್ಕುದು ಹೀಂಗೆ ಇಂತವು ಹುಳಿ ಬರ್ಸಿದ ತಿಂಡಿ, ತಿನ್ಸ್‌ಗಳ, ಕಾರ ಮಸಾಲೆ, ಬ್ರೆಡ್, ಬನ್ಸ್‌ಗ ಉಪ್ಪಿನ ಕಾಯಿಗ, ಎಣ್ಣೆಲಿ ಕಾಸಿದ ತಿಂಡಿಗ ಎಲ್ಲಾ ಕಾಯಿಲೆ ಹುಟ್ಟುಸುವ ಕಾರಣಗಾದೆ ಹಂಗಾಗಿ 'ಎಲ್ಲವುಕು ಇದೇ ಆಹಾರ ಸರಿ'ಂತ ಹೇಳ್ಲು ಸರಿ ಆದುಲ್ಲೆ. ಪ್ರತಿ ಒಬ್ಬನ ಸರ್ರ ಪ್ರಕೃತಿನ ಪೂರ ಅರ್ತಮಾಡಿಕಂಡ್ ಆಹಾರ ವಿಹಾರಗಳ ನಿರ್ದಾರ ಮಾಡೊಕು. ಆಯುರ್ವೇದಲಿ ಹೇಳ್ದ ಮೂಲ ತತ್ವಗಳ (Basic principles) ಪಾಲನೆ ಮಾಡ್ರೆ ಮಾತ್ರ ಆರೋಗ್ಯನ 'ಮೊದ್ದುಗ ಇಲ್ಲದೆ' ಕಾಪಾಡಿಕಂಬಕೆ ಆದೆ. ನೂರಾರ್ ಮೊದ್ದುಗಳ ತಕಂಬವು ನೆತ್ರ್ ಪರೀಕ್ಷೆ ಮಾಡ್ಸ್ಕನ 'ಸರಿ ಪ್ರಮಾಣ'ಲಿ ಇದ್ದರೆ ಅದ್ 'ಆರೋಗ್ಯ' ಅಲ್ಲ!

ನಮ್ಮ ಸರ್ರಲಿ ರೋಗ ನಿರೋಧಕ ಸಕ್ತಿನ ಕಾಪಾಡಿಕಣೆಕೆ ಈ ಕಾಗಡೆನ ಅಂಸಗಳ ನೆನ್ಪುಲಿ ಇಸಿಕಣೊಕು:–

ಎಣ್ಣೆಲಿ ಕಾಸಿದ ತಿಂಡಿ ತಿನ್ಸ್‌ಗ, ಕೃತಕ ರುಚಿ, ಪರಿಮಳಗಳ ಸೇರ್ಸಿದ ಆಹಾರಗ, ಅಂಗ್ಡಿಲಿ ಸಿಕ್ಕುವ ತುಂಬಾ ಸಮೆಂದ ಸೇಕರ್ಸಿ ಇಸಿದ (Ready to eat) ಆಹಾರಗಳ ತಿಂಬಕೇ ಆಗದ್. ಇಂತಾ ತಿಂಡಿ ತಿನ್ಸ್‌ಗಕ್ಲಿ ತುಂಬಾ ದಿನ ಹಾಳಾಗದಾಂಗೆ ಇಸಿಕೆ ಕೃತಕ ಸೇಕರಣೆಗಳ (Preservatives) ಹಾಕಿದ್ದವೆ. ಇವುಗ ಒಂದು ರೀತಿನ ವಿಸ ಆಗಿ (Toxins) ಮಾರ್ಪಾಡ್ ಹೊಂದಿದೆ. ಈಗ ಜೆನ ಎಲ್ಲಾ ತುಂಬಾ ಆಕ

ಸಿಡುವ ಪಾನಿಪೂರಿ, ಗೋಬಿಮಂಚೂರಿ, ಬರ್ಗರ್, ಸಮೋಸ ಕೇಕ್ ಇಂತ ತಿನ್ಸಗ (Junk food) ಇವುಗಳ್ಂದ ದೂರ ಇರೊಕು.

ಅತಿಯಾದ ಸಿಂಯಿ ತಿಂಬೊದು ಒಳ್ಳದಲ್ಲಿ. ಆಯುರ್ವೇದ ಷಡ್ರಸಾಭ್ಯಾಸನ ಒತ್ತಿ ಹೇಳ್ಟೆ. ನಮ್ಮ ಆಹಾರಲಿ ಎಲ್ಲಾ ಆರ್ ರಸಗಳ (ಮಧುರ – ಸಿಂಯಿ, ಲವಣ – ಉಪ್ಪು, ಅಮ್ಲ – ಹುಳಿ, ಕಟು – ಕಾರ, ತಿಕ್ತ – ಕಂಯಿ, ಒಗರು – ಕಷಾಯ ರಸ) ಸಮ ಪ್ರಮಾಣಲಿ ಉಪಯೋಗ್ಸೊಕು.

'ಸಂಕೀರ್ಣ ಬೋಜನ' ತೊಪ್ಪು. ಸಂಕೀರ್ಣ ಬೋಜನಂತ ಹೇಳ್ರೆ ಒಮ್ಮೆ ಉಂಬಕನ ಬೇರೆ ಬೇರೆ ದವಸ ದಾನ್ಯಗ (ಅಕ್ಕಿ, ರಾಗಿ, ಗೋದಿ) ಬೇಸಿದ, ಬೇಸದ ನೆಟ್ಟಿಕಾಯಿಗ, ಉಂಡ ಮೇಲೆ ಸಿಂಯಿಗಳೆಲ್ಲಾ ಒಮ್ಮೆಲೆ ತಕಂಡರೆ ನಮ್ಮ ಜಠರಲಿ ಜೀರ್ಣ ಪ್ರಕ್ರಿಯೆ ನಿದಾನಾದೆ. ಪಚನ ಪ್ರಕ್ರಿಯೆ ಸರಿಯಿದ್ದರೆ ಮಾತ್ರ ಆರೋಗ್ಯ ಸರಿ ಇದ್ದದೆ.

ಹೊಟ್ಟೆ ಹಸಿಯದೆ ಉಂಬೊದು ತಿಂಬೊದು ತುಂಬಾ ತೊಪ್ಪು. ಪ್ರತಿ ಊಟಕ್ಕೆ ಮುಂದೆ ಲಾಯಿಕ್ ಹೊಟ್ಟೆ ಹಸಿಯಕನ ಮುಟ್ಟ ಕಾಯೊಕು. ಹಸಿಯಟ ಕಮ್ಮಿ ಇದ್ದರೆ ಲಗು ಆಹಾರ ತಕಣೊಕು.

ಹಣ್ಣ್‌ಗಳ, ಹಸಿನೆಟ್ಟಿಕಾಯಿಗಳ ಹೊಟ್ಟೆ ಕಾಲಿ ಇರ್ಕನ ತಿಂಬೊದು ಒಳ್ಳೆದ್.

ಅಡಿಗೆಲಿ ಎಣ್ಣೆನ ಬದ್ಲಿಗೆ ತುಪ್ಪನ ಮಿತಪ್ರಮಾಣಲಿ ಬಳ್ಸಕ್. ಯಾಕೇಂತ ಹೇಳ್ರೆ ತುಪ್ಪ ಜೀರ್ಣಕ್ಕೆ ಸಾಯ ಮಾಡ್ದೆ.

ಸಾಮಾನ್ಯ ಹೆಚ್ಚಿನವು ಉಪಯೋಗ್ಸುವ ಬಿಳಿ ಸಕ್ಕರೆ (Refined sugar) ಬದ್ಲಿಗೆ ತಾಳೆ ಸಕ್ಕರೆ, ಕಲ್ಲ್ ಸಕ್ಕರೆ ಉಪಯೋಗ್ಸಕ್.

ಪೇಟೆಲಿ ಸಿಕ್ಕುವ ಕಲ್ಲ್ ಉಪ್ಪು, ಹೊಡಿ ಉಪ್ಪುನ ಬದ್ಲಿಗೆ ಸೈಂದವ ಲವಣ ಒಳ್ಳೆದ್.

ಅತಿಯಾದ ಮಾಸದ ಆಹಾರ ಒಳ್ಳದಲ್ಲಿ.

ಮದ್ಯಪಾನ, ದೂಮಪಾನ, ಹೊಸೆಪುನ ಉಪಯೋಗಗಳ್ಂದ ರೋಗ ನಿರೋಧಕ ಸಕ್ತಿ ಕಮ್ಮಿ ಆದೆ.

ನಮ್ಮ ಸರ್ರನ ನಾವು ತಿಳ್ಕಣದೆ ಪೇಪರ್ಲಿ ಬಂದ ಜಾಯಿರಾತ್ಗಳ ನೋಡಿಯೋ, ಯಾರ್ಯಾರ ಮಾತ್ ಕೇಳಿಯೋ ಸಿಕ್ಕಿದ ಸಿಕ್ಕಿದ ಲೇಹಗಳ, ಕಸಾಯಗಳ, ಮಾತ್ರೆಗಳ ವೈಜ್ಞಾನಿಕ ಆದಾರ ಇಲ್ಲದೆ ಸೊಂತ

ಮೊದ್ದುಗಳ ತಕಂಯೊದು ಸರ್‍ರಕ್ಕೆ ಒಳ್ಳದಲ್ಲ.

ವ್ಯಾಯಾಮಗ :-

1. ಜೋರು ನಡಿಗೆ.
2. ಜೋಗಿಂಗ್
3. ಆಟಗಳ ಆಡ್ದು.
4. ಕಾಲಿ ಹೊಟ್ಟೆಲಿ ನಡಿಯೊದು ವಯಸಾದವ್ರುಕೆ ಒಳ್ಳದ್.

**ಸಲಹೆಗ :-**

1. ಅನಾವಸ್ಯಕ ಚಿಂತೆಂದ ದೂರ ಇರೊಕು.

2. ಒಳ್ಳ ನಿದ್ದೆ ಮಾಡೊಕು. ಇದರ್‌ಂದ ರೋಗ ನಿರೋಧಕ ಸಕ್ತಿ ಹೆಚ್ಚಾದೆ. ಹೃದಯದ ಆರೋಗ್ಯಕ್ಕೆ ಸಾಕಾರಿ. ನೆನ್ಪುನ ಸಕ್ತಿನ ಹೆಚ್ಚಿಸಿದೆ. 'ಚಿಂತೆ ಇಲ್ಲದವಂಗೆ ಸಂತೆಲೂ ನಿದ್ದೆ'ಂತ ಹೇಳುವಲೆ? ಚಿತೆ ಹೆಣನ ಸುಟ್ಟರೆ ಚಿಂತೆ ಮೊಸ್ಸನ ಜೀವ ಇರ್ಕನೇ ಸುಟ್ಟದೆ ಗಡ.

ಈ ರೀತಿ ನಮ್ಮ ಸರ್‍ರನ ನಾವೇ ತಿಳ್ಕಂಡ್ ನಾವು ತಿಂದದರ ದಹನ - ಪಚನಕ್ಕೆ ಅನುಗುಣ ಹಿತ - ಮಿತದ ಆಹಾರ ತಿಂದ್ಕಂಡ್, ವ್ಯಾಯಾಮ ಮಾಡಿಕಂಡ್, ಮಾನಸಿಕವಾಗಿ ನಿಸ್ಚಿಂತೆಂದ ಇದ್ದರೆ ರೋಗ ನಿರೋಧಕ ಸಕ್ತಿ ಹೆಚ್ಚಾದೆ. ರೋಗಗ ನಮ್ಮಿಂದ ದೂರ ಇದ್ದವೆ. ನಾವು ಎಂಬತ್ತ್ ತೊಂಬತ್ತ್ ವರ್ಸ ಯಾಕೆ ಸೆಂಚುವರಿನೇ ಬಾರ್ಸಕ್.

ಡಾ. ನಿವೇದಿತಾ ಎ.ಪಿ.
ಸ್ವಸ್ಥ ಆಯುರ್ವೇದ, SBEBA ವೈದ್ಯರು,
#131, 8ನೇ ಕ್ರಾಸ್, ಎಂಸಿಇಸಿಹೆಚ್‌ಎಸ್ ಬಡಾವಣೆ,
ಶಿವರಾಮ ಕಾರಂತ ನಗರ,
ಬೆಂಗಳೂರು - 560077
ಮೊ.ಸಂ: 7760873091

ವೈಚಾರಿಕ

# ಕೋವಿಡ್ ಹತ್ತೊಂಬತ್‌ರೊಟ್ಟಿಗೆ ನಮ್ಮ ಬದ್‌ಕ್

●

ಲೀಲಾ ದಯಾನಂದ ಕೊಟ್ಟಕೇರಿಯನ

"ಬದುಕು ಜಟಕಾ ಬಂಡಿ, ವಿಧಿಯದರ ಸಾಹೇಬ
ಕುದುರೆ ನಾನ್ ಅವನು ಪೇಳ್ದಂತೆ ಪಯಣಿಗರು
ಮದುವೆಗೋ ಮಸಣಕೋ ಹೋಗೆಂದ ಕಡೆಗೋಡು
ಪದ ಕುಸಿಯೆ ನೆಲವಿಹುದು ಮಂಕುತಿಮ್ಮ"ತ ಕವಿ ಡಿ.ವಿ. ಗುಂಡಪ್ಪನವು ಅವರ ಪದ್ಯಲಿ ಹೇಳ್ಯೊಳೊ. ಈ ಪ್ರಪಂಚ ಅದೆಷ್ಟೇ ರಬಸಲಿ ಹೋದರೂ, ಆಕಾಸಂದಾಚೆ ಹಾರಿರೂ, ಕಡೇಲಿ ಅದ್ ನಾವ್‌ಗ್ಯಾರಿಗೂ ಗೊತ್ತೇ ಸಾಲದ ಒಂದ್ ಅಗೋಚರ ಸಕ್ತಿನ ಹಿಡ್‌ತಲಿ ಇಟ್ಟೊತ ಹೇಳ್‌ದರ ಸುಳ್ಳಾತ ಹೇಳಿಕೆ ಆದುಲೆ. ನಮ್ಮ ಬರಿಕಣ್ಣಿಗೆ ಕಾಂಬಕೆನೂ ಸಿಕ್ಕದ, ಇಂದ್ರಿಯಗಳ ಅನುಬವಕೂ ಬಾರದ, ಚೀನಾ ದೇಸಂದ ಕೆಟ್ಟಿ ಬಸ್‌ರ್‌ಂದ ಹೊರ್‌ಗೆ ಬಂದ ಸಣ್ಣ ಒಂದು ವೈರಾಣು ಇಡೀ ಪ್ರಪಂಚನೇ ಅಲ್ಲೋಲ ಕಲ್ಲೋಲ ಮಾಡ್ಯುಟು.

ಕ್ರೂರ ಪ್ರಾಣಿಗಳೊಟ್ಟಿಗೆ, ರಕ್ಕಸರೊಟ್ಟಿಗೆ, ಪ್ರಳಯದಂತ ದುರಂತಗಳೊಟ್ಟಿಗೆ, ಬಯಂಕರಾದ ಜೀವಕ್ಕೆ ಕುತ್ತ್ ತರ್‌ವಂತ ನೂರಾರ್ ರೋಗ-ರುಜಿನಗಳೊಟ್ಟಿಗೆ ಹೋರಾಡ್‌ಕಂಡೇ ಈ ಮನ್‌ಸರ್ ಬುದ್ಧಿವಂತಿಕೆಂದ ಬದ್‌ಕಿ ಬಂದೊಳೊ ಮತ್ತೆ ಬದ್‌ಕ್‌ತನೂ ವಳೊ. ಹಂಗೆನೇ ಕೊರೋನಾತ ಹೇಳ್‌ವ ಈ ಮಹಾಮಾರಿಂದ ಸುಮ್ಮನೇ ಇದ್ದ ಈ

ಪ್ರಪಂಚ. ಮೆಲ್ಲ ಯಾಗೋಳ್‌ನ ಬದ್‌ಕ್‌ನ ಸುರುಮಾಡ್‌ತಾ ಉಟ್ಟು.
ಎಂತದೇ ಇರ್‌ಲಿ ನಾವೆಲ್ಲರೂ ಈ ಕೊರೋನಾದೊಟ್ಟಿಗೆ ಬದ್‌ಕುದು
ಅನಿವಾರ್ಯ ಆವುಟು.

ಸಾಮಾನ್ಯವಾಗಿ ಈ ತರದ ಅಂಟುಕಾಯಿಲೆಗ, ಯುದ್ಧ-ಹೊಡ್‌ದಟಗ,
ಪ್ರಕೃತಿ ವಿಕೋಪಗ ಪ್ರಪಂಚನ ಹತ್ತಿಪ್ಪತ್ ವರ್ಸಗಳಷ್ಟ್ ಹಿಂದೆ ಊಂದಿ
ನಿಲ್‌ಸಿದೆ. ಆದರೆ ಈ ಕೊರೋನಾತ ಹೇಳ್‌ವ ಸುಂಟರಗಾಳಿಲಿ ಸಿಕ್ಕಿ
ದಾರಿಕಾಂಬದಂತಾಗಿರ್‌ಕನ ನಾವೆಲ್ಲವೂ ಅದ್‌ರೊಟ್ಟಿಗೆ ಎಚ್ಚರಿಕೆಂದ ಹೆಜ್ಜೆ
ಇಸದೆ ಬೇರೆ ದಾರಿನೇ ಇಲ್ಲೆ.

'ಜೀವ ಇದ್ದರೆ ಜೀವನ'ತ ಹೇಳ್‌ವೆ. ಎಷ್ಟ್ ದಿನ ಹಂಗೇತ ನಾವ್
ಮನೇಲಿ ಸುಮ್ಮನೆ ಕುದ್ದ್‌ಕಣಕ್? ನೀವೇ ಹೇಳಿ ಈ ಕೊರೋನಾಕೆ
ಸರಿಯಾದ ಮಾತ್ರೆಗ ಆಗಲೀ, ಮೊದ್ದಾಗಲೀ ಬಾಕೆ ಮುಟ್ಟ ನಾವ್
ನಮ್ಮದೇ ಆದ ಜಾಗ್ರತೆಲಿ ಇರಿಕಾದೆ. ಮೊಕಕೆ ಸರಿಯಾದ 'ಮಾಸ್ಕ್'ನ
ಹಾಕಂಡ್, ಕೈಗೆ ಸ್ಯಾನಿಟೈಸರ್ ಉಜ್ಜಿಕಂಡ್, ಸಾಮಾಜಿಕ ಅಂತರನ
ಕಾಪಾಡಿಕಂಡ್ ನಾವೆಲ್ಲವೂ ಸರಕಾರದೊಟ್ಟಿಗೆ ಹಂಗನೇ ಕೊರೋನಕಾಗಿ
ಕೆಲ್‌ಸ ಮಾಡ್‌ತಿರುವಂತ 'ಕೊರೋನಾ ಯೋಧ'ರೊಟ್ಟಿಗೆ ನಮ್ಮ
ಆರೋಗ್ಯನ - ಜೀವನ ಉಳ್‌ಸಿಕಂಬಕೆ ನಾವೂ ಸನ ಕೈ ಜೋಡ್‌ಸೊಕು.
ಸೋಂಕು ಬಾರದಂಗೆ ಎಚ್ಚರ ವಯ್‌ಸೊಕು.

ಜೇರೆವಕೆ ಹೋಲ್‌ಸಿರ 'ಕೋವಿಡ್ 19'ತ ಹೇಳ್‌ವ ಈ ವೈರಾಣು
ವನೇನೂ ಅಲ್ಲ. ಇದ್‌ರಿಂದಾಗಿ ಸತ್ತ್ ಹೋದವು ಕೂಡಾ ಬಾರೀ ಕಮ್ಮಿ.
ಹಂಗಾಗಿ ನಾವು ವಿಪರೀತ ಹೆದ್‌ರಿಕಂಡ್ ಬದ್‌ಕುವರ್‌ಲಿ ಏನೇನೂ
ಅರ್ತ ಇಲ್ಲೆ. ಹೊರ್‌ಗಿನವರೊಟ್ಟಿಗೆ ಇದ್ದ್‌ಕಂಡೇ, ರೋಗ ಪ್ರತಿರೋಧಕ
ಸಕ್ತಿನ ಗಳ್‌ಸಿಕಂಡ್, ಬೆಳ್‌ಸಿಕಂಡ್, ಉಳ್‌ಸಿಕಂಡ್ ನಾವ್ ಬದ್‌ಕೊಕು.
'ಕೋವಿಡ್ ಹತ್ತೊಂಬತ್ತ್'ತ ಹೇಳ್‌ವ ಈ ವೈರಾಣು ಹಿಂಗೊಂದ್ ಎಲ್ಲರ್‌ನ
ಹೆದ್‌ರಿಸಿ ಕೂರಾಸಿದೇತ ಹೇಳ್‌ದು ಯಾವನೊಟ್ಟಿಂಗೂ ಗೊತ್ತಿತ್ತ್‌ಲೆ.
ದೊಡ್ಡ ದೊಡ್ಡ ವಿಜ್ಞಾನಿಗಳ್‌ಂದ ಹಿಡ್‌ದ್ ಜ್ಯೋತಿಸಿಗಳ್‌ಗೂ ಇದ್
ಗೊತ್ತಾತ್‌ಲೆ. ಹಂಗಾಗಿ ಎಷ್ಟೆಷ್ಟೋ - ಹೆಂಗೆಂಗೋ ಮೆರೀತಿದ್ದವೆಲ್ಲಾ
ಎಂತದೇ ಆದರೂ ಕಡೇಲಿ ನಾವ್ ಈ 'ಮಣ್ಣ್‌ನ ಮಕ್ಕಳೇತ' ಹೇಳ್‌ವಂತ
ಕಠಿಣ ಸತ್ಯನ ಅರ್‌ಗಿಸಿಕೊಂಡೊ.

'ಕೊರೋನಾ'ಂದಾಗಿ 'ಲಾಕ್‌ಡೌನ್', 'ಸೀಲ್‌ಡೌನ್' ಎಲ್ಲಾ ಸುರು

ವಾತ್. ಇವ್ ಜನ್‌ರ ಬದ್‌ಕ್‌ನ ಮೇಲ್ ಬಾರೀ ಪರಿಣಾಮಗಳ್‌ನ ಬೀರ್‌ತ್. ಮುಕ್ಯಾಗಿ ಜನಸಾಮಾನ್ಯರಿಂದ ಹಿಡ್‌ದ್ ಇಡೀ ಪ್ರಪಂಚದ ದುಡ್ಡ್-ಕಾಸ್‌ನ ಪರಿಸ್ಥಿತಿ ನೆಲಕಚ್ಚಿತ್. ಪ್ರವಾಸೋದ್ಯಮಕೂ ಬಲವಾದ ಪೆಟ್ಟ್ ಬೀತ್. ಅದ್‌ನೇ ನಂಬಿ ಬದ್‌ಕ್‌ತಿದ್ದವು ಕಂಗಾಲಾದೊ. ಕೂಲಿಯಾಳುಗಳ ಜೀವನನೇ ನರಕ ಆಗೋತ್. ಮಾಡಿಕೆ ಸರಿಯಾದ ಕೆಲ್ಸ ಸಿಕ್ಕದೆ ಪರ್‌ದಾಡುವಂಗಾತ್. ಪರ ಊರ್‌ಂದ ಬಂದ ಕೆಲ್ಸದವೆಲ್ಲಾ ಮೊಕ ಬಾಡ್‌ಸಿಕಂಡ್ ಅವ್‌ರವರ ಊರ್ ಕಡೆ ಹೊರ್‌ಡಿಕೆ ಸುರು ಮಾಡ್‌ದೊ. ಹೊಟೇಲ್‌ಗ, ಪಿಚ್ಚರ್ ಟಾಕೀಸ್‌ಗ ಮುಚ್ಚಿ ಹೋಗಿ, ಅವ್‌ಗಳ ಯಜ್‌ಮಾನರ್‌ಗ ದಿಕ್ಕೆಟ್ಟೊ. ಬಾಡಿಗೆಗೆ ಓದ್‌ತಿದ್ದ ರಿಕ್ಷಗ, ಕಾಸಗಿ ಬಸ್‌ಗ ಮುಂದೆ ಹೋಕೆ ಬೊತ್ತಾಗಿ ದಾರಿ ಕಾಂಬದೆ ತೆಪ್ಪಗೆ ಕುದ್ದ್‌ಬುಟ್ಟೊ. ದಿನದ ದುಡಿಮೆನ ನಂಬಿಕಂಡಿದ್ದವೆಲ್ಲಾ ತಲೆ ಮೇಲೆ ಕೈ ಹೊತ್ತೊ. 'ಆನ್‌ಲೈನ್ ಕ್ಲಾಸ್'ಗಾತ ಸುರುವಾಗಲಾಗಿ ಅಂತರ್ಜಾಲದ ಬಳಕೆನ ಸಾಮಾನ್ಯಾಗಿ ಎಲ್ಲವೂ ಕಲ್‌ತೂ. ಸಾಲೆಗೆ ಹೋಗ್‌ವಂತ ಕುಸಿ, ಮಕ್ಕಳ ಶಿಸ್ತ್ ಎಲ್ಲಾ ದೂರ ಆಗೋತ್! ಒಟ್ರಾಸಿ ಒಬ್ಬನ ಕಂಡರೆ ಇನ್ನೊಬ್ಬ ಹೆದ್‌ರ್‌ವಂಗೆ, ಸಂಸಯಲಿ ನೋಡ್‌ವಂಗೆ ಆಗೋತ್. ಬಸ್ ನಿಲ್ಲ್‌ವ ಜಾಗಲೆಲ್ಲಾ ತರಕಾರಿ ವ್ಯಾಪಾರ ಜೋರು. ಹೊಟ್ಟೆಪಾಡಿಗಾಗಿ ಜನ ಕಂಡ ಕಂಡಲೆಲ್ಲಾ ಅಂಗಡಿಗಳ್‌ನ ಹಾಕಿಕಂಡ್ ಸಣ್ಣ-ಪುಟ್ಟ ವ್ಯಾಪಾರಕ್ಕಿಳ್‌ದೊ. ಸರಕಾರಿ ಚಾಕರಿಲಿದ್ದವ್‌ಕೆ ಬುಟ್ಟರೆ ಬೇರೆ ಎಲ್ಲವ್‌ಕೂ ಕೊರೋನಾ ಬಿಸಿ ಮುಟ್‌ಸಿತ್. ಮಾಮೂಲಿನಂಗೆ ತಿಂಬಕೆ-ತಿರ್‌ಗಾಡಿಕೆ ಇಲ್ಲದೆ ಜನ ಮಂಕಾದೊ.

ಹಿಂಗೆ ಎಷ್ಟೆಷ್ಟೋ ಹೇಳಿಕಾಗದಂತ ಕಷ್ಟಗ ಬಂದರೂ, ನಾವದನ ಅನುಬವಿಸಿರೂ ಸನ ಬಹಳಷ್ಟ್ ಒಳ್ಳೆ ಪರಿಣಾಮಗಳ್‌ನ ನಾವ್ ಕಂಡಿತಾ ಕಂಡೊಳ್ಳೊ. ಪೇಟೆ ಜೀವನಕೆ ನೇತಾಡಿಕಂಡ್ ಹಳ್ಳಿನ ಮರ್‌ತಿದ್ದವು ವಾಪಾಸ್ ಓಡಿಕಂಡ್ ಬಂದೊ. ಅವರವರ ಊರು-ಜನ ಎಷ್ಟ್ ಪೊರ್ಲುತ ಅವ್‌ಕೆ ಗೊತ್ತಾತ್. ಬರೀ ದುಡ್ಡ್-ಕಾಸ್‌ನ ಹಿಂದೆ ಬಿದ್ದಿದ್ದವು, ರಕ್ತಸಂಬಂಧಗಳ ಬೆಲೆನ ತಿಳ್‌ಕಂಡೊ. 'ನಾ ಹೊರಗೆ ಹೋತ್‌ಲೆರೆ ಪ್ರಪಂಚನೇ ತಲೆ ಮೇಲೆ ಬಿದ್ದದ್'ತ ಗ್ಯಾನ ಮಾಡ್‌ಕಂಡ್ ದಿನ ಬೆಳಗಾದರೆ ಪುರ್‌ಸೊತ್ತಿಲ್ಲದಂಗೆ ಮನೇಂದ ಹೊರಗೆ ಓಡ್‌ತಿದ್ದವು ಕಾಲ್‌ಚಾಚಿ ಮನೇಲೆ ಕುದ್ದೊ! ಮನೇಲಿ ಹೆಣ್ಣ್-ಮಕ್ಕ-ಹೆತ್ತವರೊಟ್ಟಿಗೆ

ಕಾಲ ಕಳ್‌ದೊ. ಕಷ್ಟ-ಸುಕ, ಪಟ್ಟಾಂಗ ಹೊಡ್‌ದೊ, ಕುಸೀಲಿ ಬೇರೆ ಬೇರೆ ಆಟ್‌ಗಳ್‌ನ ಆಡ್‌ದೊ. ಹಳೆಕಾಲದ ನೆಂಪುಗಳ್‌ನ ಅಪ್ಪ-ತಾತಂದ ಕೇಳಿ ತಿಳ್‌ಕಂಡೊ, ಒಳ್ಳೊಳ್ಳೆ ಪುಸ್ತಕಗಳ್‌ನ ಓದಿದೊ, ಅವ್‌ರವರ ಹವ್ಯಾಸಗಳ್‌ನ ಪುನ ಸುರುಮಾಡಿಕೊಂಡೊ. ಮನೇಲಿ ಎಲ್ಲವ್ರೂ ಒಟ್ಟಿಗೆ ಕುದ್ದ್‌ಕಂಡ್ ಪಿಚ್ಚರ್‌ಗಳ್‌ನ ನೋಡ್‌ದೊ. ಅಡ್‌ಗೆಮನೆ ಕಡೆ ತಲೆ ಹಾಕದಿದ್ದ ಗಂಡ್ ಜನ ಹೆಣ್ಣ್‌ಗಳೊಟ್ಟಿಗೆ ಮನೆಕೆಲ್‌ಸಲೂ ಸಾಯ ಮಾಡಿ ಅವರ ಮೊಕಲಿ ನಗೆ ತರ್‌ಸಿದೊ. ರುಚಿ ರುಚಿ ಅಡ್‌ಗೆ - ತಿಂಡಿ ಮಾಡಿಕಂಡ್ ಉಂಡೊ.

ಸಮಾಜಲಿ ಸಾಮಾನ್ಯಾಗಿ ನಡೀತಿದ್ದ ದೊಂಬಿ, ಗಲಾಟೆ - ತಕರಾರ್, ಜಾತಿ ಜಗಳಗ ಎಲ್ಲಾ ಕಮ್ಮಿಯಾತ್. ಕೆಟ್ಟ ವಿಚಾರಗಳಿಗೆಲ್ಲಾ ಒಂದು ತೆರೆ ಎಳಕಂಡ್ ಬಾತ್. ಮಹಾತ್ಮಾಗಾಂಧಿ ಕಂಡ ಸಪ್ನದಂಗೆ ಪ್ರಧಾನಿ ಮೋದಿಯುವ ಯಾಗೋಳ್ ಹೇಳ್ತಾ ಇದ್ದಂಗೆ 'ಸ್ವಚ್ಛ ಭಾರತ' ಅವಾಗೇ ಕಾಂಬಂಗಾತ್. ಕುಡಿಯಕೆ ಕಳ್ಳ್, ಸೇದಿಕೆ ಬೀಡಿ-ಸಿಗರೇಟ್, ತಿಂಬಕೆ ಹೊಗೆಸೊಪ್ಪ್ ಸಿಕ್ಕದೆ ಸುಮಾರ್ ಮನೆಯವ್‌ಕೆಲ್ಲಾ ನೆಮ್ಮದಿಯಾತ್. ಎಲ್ಲಿ ಸಿಕ್ಕರೂ ಅಲ್ಲಿ ಉಗಿಯುವ ಜನ್‌ರೆಲ್ಲಾ ಉಗಿಯಕೆ ಹಿಂದೆ ಮುಂದೆ ನೋಡ್‌ವಂಗೆ ಆತ್. ಹೊಳೆ ಗಂಗೆನಂಗೆ ಬಾಕಿ ಇದ್ದ ಬೇರೆಲ್ಲಾ ಹೊಳೆಗ ಸನ ಕೊಚ್ಚೆ-ಕಸನೆಲ್ಲಾ ತೊಳ್‌ದ್ ಬಳ್‌ದ್ ಹಾಕಿ ಸುದ್ದ ಮಾಡಿಕೊಂಡೊ. ನಾವ್ ಉಸ್‌ರಾಡ್‌ವ ಗಾಳಿನೂ ಸುದ್ದ ಆಗೋತ್. ವಾಹನಗ ಅತ್ತಿತ್ತ ಹೋದು ಬಾರೀ ಕಮ್ಮಿಯಾಗಿ ಅಪಗಾತಲಿ ಸಾಯುವ ಸಂಖ್ಯೆ ಇಲ್ಲದೆನೇ ಆತ್. ಇಂಧನ ಬೇಕಷ್ಟ್ ಉಳ್‌ಕೆಯಾತ್. ಸುಕಾಸುಮ್ಮನೆ ಮಾಡ್‌ತಿದ್ದ ದುಂದುವೆಚ್ಚ ನಿತ್ತೋತ್. ಆಡಂಬರ ತೋರ್‌ಸಿಕೆ ಉಪಾಯ ಇಲ್ಲೆ. ಹಾಂಕಾರಿಗಳ ದೌಲತ್ ಕಮ್ಮಿಯಾತ್. ಜನ್‌ರ ಶೋಕಿನೂ ಇಲ್ಲದಾತ್. ಜನ ಯೋಗ-ಧ್ಯಾನನ ರೂಡ್‌ಸಿಕಂಡ ಸೊಬಗರಾದೊ. ಮಾಯಾಗಿದ್ದ ಕೂಡ್ ಕುಟುಂಬದ ಪೊಲ್ಲ್ ಪುನ ಕಾಂಬಕೆ ಸುರ್‌ವಾತ್. ಪಿಳ್ಳೆಕ ಚಾಂಪ ಚಾಮ್ಯವ್ವನ ಕೊಂಡಾಟಲಿ ದಿನ ಕಳ್‌ದೊ. ಹಡ್ಲ್ ಬುಟ್ಟ ಗದ್ದೆಗ ಹಸ್‌ರಾದೊ.

ಪಂಡ್ ಕಾಲದ ಎಷ್ಟೋ ಆಚಾರ-ವಿಚಾರಗಳ್‌ನ 'ಮೂಢನಂಬಿಕೆ'ತ ಹೀಗ್‌ಳದ್ ಬುಟ್ಟದ್ದ ವಿಸ್ಯಗಳ್‌ಲಿ ನಾವ್‌ಗೆ ಸತ್ಯ ಕಾಂಬಂಗಾತ್. ಸುರೂಲೆಲ್ಲಾ ಹೊರ್‌ಗೆಂದ ಬಂದವ್‌ಕೆ ಚೊಂಬ್‌ಲಿ ನೀರ್ ಕೊಡ್‌ತಿದ್ದೊ, ಮತ್ತೆ ಅವ್ ಕೈಕಾಲ್ ತೊಳಕಂಡೇ ಒಳಗೆ ಹೊಕ್ಕ್‌ತಿದ್ದೊ. ಅವ್‌ರ

ಗುಟ್ಟ್ ಈಗ ನಾವ್‌ಗೆ ಗೊತ್ತಾಕೆ ಸುರ್‌ವಾತ್. ಕಾಂಬಕನ ಕೈ ಕುಲ್‌ಕದೆ ಕಾಲ್‌ಗಳನ ಎರ್‌ಡ್ ಕೈಲಿ ಮುಟ್ಟಿ ನಮಸ್ಕಾರ ಮಾಡಿ ಆಸೀರ್ವಾದ ಪಡ್‌ಕಣ್‌ತಿದ್ದ ಕಾರಣನು ನಾವ್‌ಗೆ ತಿಳ್‌ತ್. ತಿಂದ್ ಎದ್ದ ಮೇಲೆ ಸೆಗಣಿ ಹಾಕಿ ಸಾರ್‌ಸ್‌ತಿದ್ದ ಗುಟ್ಟ್‌ನೂ ಗೊತ್ತಾತ್. ಆರೋಗ್ಯ ಭಾಗ್ಯಕ್ಕಾಗಿ ಹಿರಿಯವ್ ನಡ್ಕಣ್‌ತಿದ್ದ ಎಲ್ಲಾ ಕ್ರಮಗಳ್‌ಲಿ ವೈಜ್ಞಾನಿಕ ಸತ್ಯ ಕಂಡ್ ಬಾತ್. 'ಹಿತ್ತಲಗಿಡ ಮದ್ದಲ್ಲ'ತ ದೂರ ಇದ್ದವ್ ನಮ್ಮಲ್ಲೇ ಸಿಕ್ಕ್‌ವಂತ ಸೊಪ್ಪು-ಸದೆಗಳ್‌ಲಿ ಎಷ್ಟ್ ಮೊದ್ದುಗ ಉಟ್ಟೊಂತ ಗೊತ್ತಾಗಿ ಆಸ್ಚರ್ಯ ಪಟ್ಟೊ. ಕಷಾಯಗಳ್‌ನ ಮಾಡ್‌ಕಂಡ್ ಕುಡ್‌ದೊ. ಸಣ್ಣ-ಪುಟ್ಟ ಕಾಯಿಲೆ ಕಸಾಲೆಗೆಲ್ಲಾ ಅವ್ವಂದ್‌ರ ಮಾತ್‌ನ ಕೇಳಿಕೆ ಸುರು ಮಾಡ್‌ದೊ. ಪಂಡ್‌ನವ್ ಹೇಳ್‌ತಿದ್ದದೆಲ್ಲಾ ಪಥ್ಯ ಅಲ್ಲಾತ ತಿಳ್‌ಕಂಡೊ. ದೇವ್‌ರ ಮೇಲೆ ಭಕ್ತಿನ. ಎಲ್ಲನ ಸಯ್‌ಸಿಕಂಬಂತ ಸಕ್ತಿನ ಜನಗ ಜೆಳ್‌ಸಿಕಂಡೊ.

ಈ ತರದ ಒಳ್ಳೆ ಬದಲಾವಣೆಗಳ್‌ನ ನೋಡ್‌ಕನ ನಾನ್ ಕೇಳದಂತ ಒಂದ್ ಕತೆ ಗ್ಯಾನಾತ್. ಹಿಂಗೇ ಒಬ್ಬ ಊರ್‌ಂದ ಹೊರಗೆ ಒಂದ್ ಹೊಸ ಮನೆ ಕಟ್ಟಿಸಿತ್‌ಗಡ. ಅಲ್ಲಿ ಜೇರೆ ಯಾರೂ ಮನೆನೂ ಇತ್ತ್‌ಲೆಗಡ. ಹಂಗಾಗಿ ಆಚೆ-ಈಚೆ ಎಲ್ಲಾ ಕಾಡ್ ಜೆಳಕಂಡಿತ್ತ್‌ಗಡ. ಹಂಗಾಗಿ ಸುತ್ತಮುತ್ತೆಲ್ಲಾ ಹಾವುಗ ಓಡಾಡಿಕಂಡಿರ್‌ತಿದ್ದೊ. ಅಂಗಳಕ್ಕೂ ಬರ್‌ತಿದ್ದೊ. ಒಮ್ಮೊಮ್ಮೆ ಬುಸ್‌ಗುಟ್ಟಿಕಂಡ್ ಮನೆಗೆ ಹುಕ್ಕ್‌ತಿಟ್ಟೊಗಡ. ಆ ಮನೆಯವ್‌ಕೆಲ್ಲಾ ಹಾವುತ ಹೇಳ್‌ರೆ ಜಾರೀ ಹೆದರಿಕೆ. ಸುರು ಸುರೂಲಿ ವಿಪರೀತ ಹೆದ್‌ರಿದ ಮನೆಯವು ಪೇಟೆಂದ ಹಾವು ಹಿಡಿಯಾವ್‌ರ್‌ನ ಕರ್‌ಸಿ ಒಂದೊಂದು ಹಾವಿಗೂ ಐನೂರು ರೂಪಾಯಿಗಳ್‌ನ ಕೊಟ್ಟೊ. ಒಂದೆರ್‌ಡ್ ವಾರ ಕಳೆಯಕನ ದುಡ್ಡ್ ಕೊಟ್ಟ್ ಅವಕೆ ಸಾಕಾತ್. ಅಂವ ಜಾರೀ ದುಬಾರಿಯಾತ್‌ಂತ ಹೇಳಿ ಅಲ್ಲೆ ಹಕ್ಕಲೆ ಹಾವ್ ಹಿಡಿಯುವವರ್‌ನ ಕರ್ಸಿ ಹಾವುಗಳ್‌ನ ಹಿಡ್‌ಸಿಕೆ ಸುರು ಮಾಡ್‌ದೊ. ಒಂದೊಂದು ಹಾವ್‌ಗೆ ಅಂವ ನೂರ ರೂಪಾಯಿಈತ ಹೇಳ್‌ತ್. ದಿನ ಕಳದಂಗೆ ಈ ಹಾವುಗಳ್‌ನ ನೋಡಿ - ನೋಡಿ ಅಬ್ಯಾಸಾತ್. ಅಂಗಳಲಿ ಓಡಾಡ್‌ತಿದ್ದ ಹಾವ್‌ಗಳ್‌ಗೆಲ್ಲಾ ಗಿಡಕೆ ನೀರ್ ಜಿಡ್‌ವ ಪೈಪ್‌ಲೇ ನೀರ್ ಹಾರ್‌ಸಿ ಅವ್‌ಗಳ್‌ನ ಹೆದ್‌ರ್‌ಸಿ ಓಡ್‌ಸಿಕೆ ಕಲ್ತ್‌ಕೊಂಡೊ. ಅವ್‌ರ ಹೆದ್‌ರಿಕೆನೂ ಕಮ್ಮಿಯಾತ್. ಜೇರೆ ದಾರಿ ಇಲ್ಲದೆ ಹಾವುಗಳ್‌ನ ಕಾಂಬಕನ ಹೆದ್‌ರದೆ ಅವ್‌ಗಳೊಟ್ಟಿಗೆ ಎಚ್ಚರಿಕೆಲಿ ಬದ್‌ಕಿಕದೆ ಕಲ್ತ್‌ಕೊಂಡೊ. ಹಂಗೆ ಮುಂದೆ ಅವ್‌ರ ಬದ್‌ಕ್ ಆರಾಮಲಿ ಮುಂದ್‌ವರ್‌ತ್‌ಗಡ.

ನಾವ್‌ಗೆ ಮನ್‌ಸ್‌ಲಿ ಪೆದ್‌ರಿಕೆ ಇದ್ದರೆ ಬಿದ್ದ್‌ಕಂಡಿದ್ದ ಒಂದು ಬೊಳ್ಳಿನೂ ಪಾವಾಗಿ ಕಂಡದೆ. ಧೈರ್ಯಲಿದ್ದರೆ ಅಲ್ಲಿದ್ದ ಪಾವೂ ಬೊಳಿ ನಂಗಾದೆ. ಕೋವಿಡ್ ವಿಸಯನೂ ಅಷ್ಟೆ. ಈಗ ನಾವ್‌ಗೆ ಸುರೂಲಿದ್ದ ಪೆದ್‌ರಿಕೆ ಪೋವುಟು. ಈಗ ನಾವ್ ಪಂಗೆ ಅದ್‌ನ ಬಾರದಂಗೆ ತಡಿಯಾಕ್ ಮತ್ತೆ ಪಂಗೆ ಪರಿಹಾರ ಹುಡ್‌ಕುದೂತ ನಾವ್ ಗ್ಯಾನ ಮಾಡಿ ಕಂಡ್ ಕೊಂಡೊಳೊ. ಯಾಗ ಮನ್‌ಸ್‌ಗೆ ನಾವ್ ಧೈರ್ಯ ಮಾಡಿಕೊಂಡವೆನೋ ಆಗ ಸಮಸ್ಯೆಗೆ ನಾವ್‌ಗೆ ಪರಿಹಾರ ಸಿಕ್ಕಿದೆ. ದಾರಿನೂ ಕಂಡದೆ. ಪಂಡ್ ಕಾಲಂದನೂ ಹಿಂಗೆನೆ. ಎಷ್ಟೆಷ್ಟೋ ಕಷ್ಟದ ದಿನಗ್‌ಳ್‌ನ ನಮ್ಮ ಹಿಂದಿನವು ಬುದ್ಧಿವಂತಿಕೆಂದ, ಧೈರ್ಯಂದ ಪಾರ್ ಮಾಡಿಕಂಡ್ ಬಂದೊಳೋತ ಇತಿಹಾಸ ಹೇಳ್‌ದೆ.

ಇಷ್ಟ್ ದಿನ ನಾವ್ ಚೀನಾಂದ ಬರುವಂತ ಕಮ್ಮಿ ಕ್ರಯಕೆ ಸಿಗ್‌ತಿದ್ದಂತ ಸಾಮಾನ್‌ಗಳ್‌ಗೆ ಜೋತು ಬಿದ್ದಿದ್ದೊ. ನಾವ್‌ಗೆ ಅವ್‌ಗಳ್‌ನ ತಯಾರಿಸುವಂತ ಸಕ್ತಿ - ಸಾಮರ್ಥ್ಯ ಇದ್ದರೂ ಸನ ಸೋಂಬೇರಿತನ ನಾವ್ ಜಡ್ಡ್‌ಗಟ್ಟಿದ್ದೊ. ಈಗಾದರೂ ಹನಿಯ ಬುದ್ದಿ ಬಂದಂಗೆ ಕಂಡದೆ! ಸ್ವದೇಶಿ ಉತ್ಪನ್ನಗಳ್‌ನ ತಯಾರಿಸ್‌ಕಂಡ್ ಅವ್‌ರವ್‌ರ ಕಾಲ್‌ಮೇಲೆ ನಿಲ್ಲುವಂತೆ ಕಾಣ್ತಾ ವುಟ್ಟು. ನಾವ್ ಬೆಳ್‌ದ, ನಮ್ಮವೇ ಬೆಳ್‌ಸಿದ ಉತ್ಪನ್ನಗಳ್‌ನ ಬಳಸಿಕಂಡ್ ದೇಸನ ಉದ್ಧಾರ ಮಾಡ್‌ದು ನಮ್ಮ ಕೈಲೇ ಉಟ್ಟು. ಸ್ವಾವಲಂಬಿಗಳಾಗಿ, ಸ್ವಾಭಿಮಾನಲಿ ಬದ್‌ಕಿಕೆ ಕಲಿಯೊಕ್.

ನಮ್ಮ ಬದ್‌ಕೂತ ಹೇಳ್ದು ನೀರ ಮೇಲೆ ಇರ್‌ವ ಗುಳ್ಳೆನಂಗೆ ಯಾಗ ಒಡ್‌ದ್ ಹೋದೆನೋ ಯಾರಿಗೂ ಗೊತ್ತ್‌ಲೆ. ಕೊರೋನಾದ ಸಾವುಗಳ್‌ನ ನೋಡಿಯಾದರೂ ನಾವ್ ಪಾಠ ಕಲಿಯೊಕು. ಸತ್ತಂವ ಬಡವ ಇರ್‌ದು, ದುಡ್ಡ್‌ಗಾರನೇ ಇರ್‌ದು. ಅವ್‌ರ ಮೊಕನ ಒಬ್ಬನೂ ನೋಡಿಕಾಗದಂತ ಪರಿಸ್ಥಿತಿ ಬಾತ್! ಪ್ರಕೃತಿ ಕಲ್‌ಸಿದ ಪಾಠನ ನಾವ್ ಮರಿಯದೆ ಪೊರ್ಲುಲಿ, ಒರ್ಮೆಲಿ ಬದ್‌ಕಿಕೆ ನಾವ್ ಸುರುಮಾಡೊಕು. ಕೊರೋನಾ ಕಾಲದ ಬೆಲೆ ಕಟ್ಟಿಕಾಗದಂತ ಅನುಭವಗಳ ಬುತ್ತಿನ ದಾರಿದೀಪಾಗಿ ಮಾಡಿಕಂಡ್, ಒಳ್ಳೆ ದಿನಗಳ್‌ನ ಕಾಂಬಕೆ ಬಾರೀ ಎಚ್ಚರಿಕೆಲಿ ನಮ್ಮ ಹೆಜ್ಜೆಗಳ್‌ನ ಇಸೊಕು. ಆಗ ಮಾತ್ರ ನಾವೆಲ್ಲಾ ಸಾರ್ಥಕ ಬದ್‌ಕ್‌ನ ಕಾಂಬಕೆ ಸಾಧ್ಯ.

ಲೀಲಾ ದಯಾನಂದ
ಕೊಟ್ಟಕೇರಿಯನ, ಮಡಿಕೇರಿ ಮೊಬೈಲ್ : 9449858586





# ಕಿಚ್ಚ್‌ನ ಉರಿ

•

ಓಂಶ್ರೀ ದಯಾನಂದ ಕೂಡಕಂಡಿ

ಸ್ವರ್ಗನೇ ಭೂಮಿಗೆ ಬಂದ್ ನೆಲ್ಲಿದಂಗೆ ಕಾಂಬುವ ಹಚ್ಚ ಹಸ್‌ರ್, ಚಿಲಿಪಿಲಿತಾ ಕೂಂಗಿಕಂಡ್ ಮನ್‌ಸಿಗೆ ಖುಸಿ ಕೊಡೋ ಹಕ್ಕಿಗ. ಭೂಮಿತಾಯ್‌ಗೆ ಹಸ್‌ರ್ ಸೀರೆನ ಉಡ್‌ಸಿ ಶೃಂಗಾರ ಮಾಡ್‌ದಂಗೆ ಕಾಂಬುವ ನಾಟಿಗದ್ದೆಗ. ದೇವತೆಗಳೇ ದೇವಲೋಕಂದ ನೊರೆಹಾಲ್ನ ಹೊಯ್‌ತಾ ಇರೋಂಗೆ ಕಾಂಬುವ ತೋಡ್‌ಗಾ. ಒಟ್ಟ್‌ನಲ್ಲಿ ಸ್ವರ್ಗನೇ ನಾಚಿ ನೀರಾಗೋಂಗೆ ಕಾಂಬ ಲಾಯ್‌ಕದ ಊರ್ ಅದ್.

ಆದ್ರೆ ಯುಗಾದಿನೇ ಆಗ್ಲಿ ಇಲ್ಲೇ ಬ್ಯಾರೆ ಯ್ಯಾವ ಹಬ್ಬ ಹರಿದಿನನೇ ಬರ್‌ಲಿ ಆ ಗುಡ್‌ಸ್‌ಲ್ ಕಾಣ್‌ತ್ತಿದ್ದದ್ ಬರೀ ಜೇವ್ರುನ ಕಹಿ. ಆ ಗುಡ್‌ಸ್‌ಲ್‌ಲ್ಲೇ ವಾಸಮಾಡ್ತಾ ಇತ್ತ್ ನಮ್ಮಕತೆನ ನಾಯಕಿ ಜೆಳ್ಳಿ. ಹದ್ನೆಂಟ್ ವರ್‌ಸದ ಆ ಗೂಡೆದ್ ಹೆಸ್‌ರಿಗೆ ತಕ್ಕ ರೂಪ. ಆದ್ರೆ ಹದ್ನೆಂಟ್ ವರ್ಸಲಿ ಹೆಣ್ಮಕ್ಕಳ ಮನ್‌ಸ್‌ಲಿ ಅರ್‌ಳ್‌ವ ಕನ್‌ಸ್‌ಗಳ್ ಅರ್‌ಳಿಕೆ ಜೆಳ್ಳಿಯ ಮನ್‌ಸ್‌ಲಿ ಜಾಗನೇ ಇತ್‌ಲೆ. ಜೆಳ್ಳಿನ ಅಮ್ಮ ಲಕ್ಷ್ಮಿ. ಉಸಾರಿಲ್ಲದೇ ತನ್ನ ಅರ್ಧ ಆಯ್‌ಸ್‌ನ ಜೀವ ಇದ್ದರ್ ಸಹ ಸತ್ತ ಹೆಣದಂತೆ ಕಳಿತಿತ್. ತಾನ್ ಕನ್‌ಸ್ ಕಾಣ್‌ತ್ತಿದ್ದ ಹಸ್‌ರ್ ಬಣ್ಣದ ಸೀರೆನ ಯ್ಯಾಗ ಉಟ್ ತನ್ನ ಕನ್‌ಸ್‌ನ ನನ್‌ಸ್ ಮಾಡ್ದೂತಾ ಕಾಯ್‌ತ ಇತ್. ಹೆಂಡ ಕುಡ್‌ಕ ಗಂಡ ಯಾವ ಚರಂಡಿಂದ ಎದ್ದ್ ಮನೆಗೆ ಬಂದದೆತ ಕಾಯೋದ್ರಲ್ಲೇ ಸುಖ ಕಾಣ್‌ತಿತ್.

ಚೆಕ್ಕಿ ಗೂಡೆ ಕಷ್ಟಗಳ ಸರಮಾಲೆಲೇ ಜೀಯ್‌ತಾ ಇದ್ಳು. ನಗೆನ ಹೂಮಳೆನ ಸುರಿಸ್‌ತಾ ಇತ್. ಅವ್ಳ ಪೊರ್ಲುತನ ನೋಡಿ. ದುಷ್ಟರ್ ಅವ್ಳ ಹತ್ರನೇ ಬಾಕೆ ಆಗದ್‌ತಾ ಹೇಳಿ ಯಾಗಲೂ ಜೋಪಾನಲಿ ಇರ್‌ತಿತ್ತ್.

ಕತ್ತಲಾಗ್‌ತಾ ಇದಂಗೆ ದೊಂದಿ ಉರ್ಸ್‌ಕಂಡ್ ಅದ್‌ರ ಹೊಗೆಲೀ ಮೀಕಂಡ್ ಮಲ್ಲಿಗೆ. ಕನ್‌ಕಾಂಬರ ಹೂಗಳ್‌ನ ಮಾಲೆಕಟ್ಟಿ ಹೂಮಾರವ್‌ಕೆ ಕೊಟ್ಟ್, ಹಂಞ ದುಡ್‌ನಸ ಸಂಪಾದನೆ ಮಾಡ್‌ತಿತ್ತ್.

ಅಂದೊಂದು ದಿನ ಚೆಕ್ಕಿನ ಕಣ್‌ರಸ್ತೆ ಬದಿಲಿದ್ದ ಬಟ್ಟೆ ಅಂಗ್‌ಡಿ ಮ್ಯಾಲೆ ಬಿತ್ತ್. ಅಷ್ಟ್‌ರಲ್ಲೇ ಮಳೆನೂ ಸುರಾಗಿಬಿಟ್ಟ್. ಅಮ್ಮಂಗೆ ಹಸ್‌ರ್ ಸೀರೆತಾ ಹೇಳ್ರೆ ಬಾರಿ ಖುಸಿ. ನಾನಿಂದ್ ಅಮ್ಮಂಗೆ ಸೀರೆ ತಕಂಡ್ ಹೋಗಿ ಕೊಟ್ರೆ ಬಾರಿ ಖುಸಿಪಟ್ಟದೆ ತಾ ಮನ್‌ಸ್‌ಲೇ ಗ್ಯಾನ ಮಾಡ್ತ್ ಚೆಕ್ಕಿ. ತನ್ಹತ್ರ ಇದ್ದ ದುಡ್ಡ್‌ನ ಎಲ್ಲಾ ಸೇರ್‌ಸಿ ಅಮ್ಮಂಗೆ ಲಾಯ್‌ಕ ಕಾಂಬುವ ಸೀರೆನ ತಕಂಡೇ ಬಿಟ್ಟ್. ಅಷ್ಟೊತ್ತ್‌ಗೆ ಮಳೆ ಇನ್ನ್ ಜೋರಾಗಿ ಸುರಿಯ್ಯಕೆ ಸುರಾತ್. ಚೆಕ್ಕಿ ಬ್ಯಾಗಬ್ಯಾಗ ನಡ್‌ಕಂಡ್ ಖುಸೀಲಿ ಮನೆಗೆ ಹೋತ್.ಮನೆ ತಲ್‌ಪ್‌ತಾ ಇದ್ದಂಗೆ ಚೆಕ್ಕಿನ ಮನೆನ ಪರಿಸ್ಥಿತಿ ನೋಡಿ ಸಿಡ್‌ಲ್ ಬಡ್‌ದಂಗೆ ಗೂಡೆ ನಿಂತೇಹೋತ್.

"ಚೆಕ್ಕಿ ಎಲ್ಲಿ ಹೋಗಿದ್ದ ಕೂಸು ನೀನ್. ನೋಡ್ ಇಲ್ಲಿ. ಮಳೆನ ರಭಸಕ್ಕೆ ಮನೆ ಒಳ್‌ಗೆಲ್ಲಾ ನೀರ್ ತುಂಬ್‌ತಾ ಉಟ್ಟು. ನಿನ್ನ ಅಪ್ಪಂಗೋ ಅದ್ರ ಗೊಡವೆನೇ ಇಲ್ಲೆ. ಬಾ ಕಂದ. ಹೆಂಗಾರ್ ಇಬ್ರ್ ಸೇರ್‌ಕಂಡ್ ಈ ಸೋರೋ ಜಾಗಗಳ್‌ನ ಸರಿಮಾಡಿಕೆ ನೋಡ್ವೊ"ತಾ ಹೇಳ್ತ್ ಲಕ್ಷ್ಮಿ.

"ನೀನ್ ಸುಮ್ಮನೆ ಇರ್ ಅಮ್ಮ... ಎಂತನೂ ಮಾಡಿಕೆ ಹೋಗ್‌ಬ್ಯಾಡ. ನಾನೆ ಎಲ್ಲಾ ಮನಾರ ಮಾಡ್ನೆ. ಆಮ್ಯಾಲೆ ನಿಂಗೆ ಏನೋ ತಂದೊಳೆ ಅಮ್ಮ. ಎಲ್ಲ ಸರಿಯಾದ ಮ್ಯಾಲೆ ನೋಡ್"ತಾ ಹೇಳ್ತ್ ಚೆಕ್ಕಿ.

ಚೆಕ್ಕಿ ಹೆಂಗೋ ಕಷ್ಟಪಟ್‌ಕಂಡ್ ಮನೆ ಒಳ್ಗೆ ತುಂಬಿದ ನೀರ್‌ನ ಕೊಡಪಾನಲಿ ಗೋಂಚಿ ಹೊರಗಡೆ ಚೆಲ್ಲಿಕೆ ಸುರ್ ಮಾಡ್ತ್. ಅಷ್ಟ್‌ರಲ್ಲೇ ಕುಂಬ್‌ಹಿಡ್‌ದ್ ನೇತಾಡ್ಕಂಡ್ ಇದ್ದ ಮರದ ಬಾರಿತುಂಡ್ ಚೆಕ್ಕಿನ ಅಮ್ಮನ ತಲೆಮ್ಯಾಲೆ ರಪ್ಪತ ಬಿದ್ದತ್. ಲಕ್ಷ್ಮಿನ ಹಣೆಗೆ ತುಂಬಾ ಪೆಟ್ಟಾಗಿ ರಕ್ತ ಸುರಿಯ್ಯಕೆ ಸುರಾತ್.

"ಅಮ್ಮ ಅಮ್ಮ ಏನಾತಮ್ಮ?? ಎದ್ದೇಳಮ್ಮ.... ಅಯ್ಯೋ ದೇವ್‌ರೇ" ತಾ ಚೆಕ್ಕಿ ಬೊಬ್ಬೆ ಹೊಡ್‌ಕಂಡ್ ಅದ್ಯಾವುದೋ ಮೂಲೆಲಿ ಕುಡ್ದ್‌ಬಿದ್ದ ಅಪ್ಪನ ಎಳ್ಸಕೆ ಕಷ್ಟಪಟ್ಟತ್. ಆದ್ರೆ ಅಪ್ಪ ಹೊಟ್ಟೆ ತುಂಬಾ ಹೆಂಡ ಕುಡ್ದ್ ಹೆಣನಂಗೆ ಮಲ್ಗಿತ್ತ್.

ಅಮ್ಮನ ಜೀವ ಉಳ್ಸಕೆ ಸಾಧ್ಯ ಇರ್‌ದು ಊರ ಪಟೇಲಂಗೆ ಮಾತ್ರತಾ ಚೆಕ್ಕಿಗೆ ಗೊತ್ತಾತ್. ಪಟೇಲ್‌ನ ನೀಚ ಬುದ್ಧಿ ಗೊತ್ತಿದ್ರುನ ಚೆಕ್ಕಿ ಬ್ಯಾರೆ ದಾರಿ ಕಾಂಬದೆ

ಪಟೇಲನ ಮನೆ ಕಡೆಗೆ ಓಡ್ತ್.

ಅಮ್ಮನ ಗ್ಯಾನ ಮಾಡ್‌ಕಂಡ್. ಒದ್ದೆ ಬಟ್ಟೆಲಿ ಓಡಿಕೆ ಆಗದೆ ಬಿದ್ದ್‌ಕಂಡ್, ಮರ್‌ಚ್‌ಕಂಡ್ ಜೆಳ್ಳಿ ಪಟೇಲನ ಮನೆಗೆ ಹೋತ್. ಬಾಗಿಲ್ ಬಡಿತಾ "ಪಟೇಲ್‌ರೇ ನನ್ನ ಅವ್ವನ ಜೀವ ಉಳ್ಸಿ ಪುಣ್ಯ ಕಟ್ಟಿಕಣಿ" ತಾ ಜೇಡಿ ಕಂಡ್ತ್. ಬಾಗಿಲ್ ತೆಗ್ದಂಗೆ ಜೆಳ್ಳಿನ ಅವಸ್ತೆ ನೋಡಿ, ಪಟೇಲಂಗೆ ಜೆಳ್ಳಿ ಯ್ಯಾವುದೋ ಕಷ್ಟಕ್ಕೆ ಸಿಕ್ಕುಟುತಾ ಗೊತ್ತಾತ್.

"ಏನ್ ಜೆಳ್ಳಿ !!ಇಷ್ಟ್ ದಿನಗ ಕಳ್ದ ಮ್ಯಾಲೇ ಈ ಪಟೇಲನ ಗ್ಯಾನ ಆತಾ?" ತಾ ಸಣ್ಣನಗೆಲಿ ಕೇಳ್ತ್ ಪಟೇಲ.

"ಅಯ್ಯೋ ದೇವ್ರೆ!! ಅಮ್ಮನ ತಲೆ ಮ್ಯಾಲೆ ಮರದ ಬಾರಿ ತುಂಡ್ ಬಿದ್ ಅಮ್ಮನ ಅರ್ಧಜೀವ ಹೋವುಟ್ಟು. ಎಲ್ಲಿಂದಾರ್ ಡಾಕ್ಟರ್‌ನ ಕರ್ಸಿ, ಅಮ್ಮನ ಉಳ್ಸಿ ಪಟೇಲಪ್ಪ"ತಾ ಹೇಳ್‌ಕಂಡ್ ಜೆಳ್ಳಿ ಜೋರ್ ಮರ್ಡಿಕೆ ಸುರ್‌ಮಾಡ್ತ್.

ಅದೆಷ್ಟೋ ವರ್‌ಸಂದ ಇಂತ ಗಳಿಗೆಗೆ ಕಾದ್ಕಂಡ್ ಇದ್ದ ಪಟೇಲ, ಅವ್ನ ಮೋಸದ ಬಲೆನ ಬೀಸಿಯೇ ಬಿಡ್ತ್.

"ನಿನ್ನ ಅಮ್ಮನ ಚಿಂತೆನ ಇನ್ ಬಿಟ್ಟ್‌ಬಿಡ್. ನಾನ್ ಪೋನ್ ಮಾಡಿ ಡಾಕ್ಟ್ರನ ನಿನ್ನ ಮನೆಗೆ ಕಳ್ಸನೆ. ಆದ್ರೆ... ಆದ್ರೆ... ನೀನ್ ಇಂದ್ ಒಂದ್ ದಿನಕೆ ನನ್ನವಳ್ ಆಕುಅಲಾ"ತಾ ಹೇಳಿ ಪಟೇಲ ಅವ್ನ ನೀಚ ಬುದ್ದಿನ ತೋರ್ಸಿಬಿಟ್ಟತ್. ಪಟೇಲನ ಮಾತ್ ಕೇಳಿ ಜೆಳ್ಳಿಗೆ ಒಮ್ಮೆ ಭೂಮಿನೇ ಬಾಯ್‌ಬಿಟ್ಟಂಗೆ ಆತ್. ಜೀವ ಕೊಟ್ಟ ಅವ್ಳ ಅಮ್ಮನ ಜೀವ ಉಳ್ಸಿಕೆ ಅವ್‌ಳ ದೇಹ ಕೊಡ್ದು ತಪ್ಪುತಾ ಅವಳ್ಗೆ ಒಂದ್‌ಕ್ಷಣ ಆಗ ಅನ್ಸುದುಲ್ಲೆ. ಅಮ್ಮನ ಪ್ರೀತಿಯ ದಂತದ ಗೊಂಬೆ ಅಂದ್ ಬ್ಯಾರೆ ಯಾವ ದಾರಿ ಕಾಂಬದೆ ಅಮ್ಮಂಗಾಗಿ ಅವ್ಳ ಸರ್ವಸ್ವನ್ನೇ ಕಳ್‌ಕಣ್‌ತ್.

ಜೆಳ್ಳಿ ಮರ್ಡ್‌ತಾ ಅಮ್ಮನ ಹತ್ರ ಓಡಿ ಹೋತ್.ಅಷ್ಟ್ರಲ್ಲಿ ಡಾಕ್ಟರ್ ಜೆಳ್ಳಿನ ಮನೆ ಹತ್‌ರನೇ ಇತ್ತ್. "ಜೆಳ್ಳಿ..... ಜೆಳ್ಳಿ.... ನಿನ್ನ ಅಮ್ಮನ ಉಳ್ಸಿಕಂಬಕ್ಕೆ ಆತ್ಲೆ ಮಗ್ಳೆ"ತಾ ಹೇಳಿ, ಡಾಕ್ಟರ್ ಪಟೇಲ ಕಳ್ಸಿದ ಗಾಡಿ ಹತ್ತಿತ್.

ಇತ್ತ ಅಮ್ಮನ ಜೀವವೂ ಉಳ್ಸಿಕೆ ಆಗದೇ, ಅತ್ತ ತನ್ನ ಶೀಲಾನೂ ಕಪಾಡಿಕಂಬಕ್ಕೆ ಆಗದೆ ಜೆಳ್ಳಿನ ಮನ್‌ಸ್ ಪಿಲಪಿಲತಾ ಒದ್ದಾಡಿಕೆ ಸುರಾತ್. ಅವ್ಳ ಯಾವ ಕಷ್ಟಕು ಆಗದ ಅವ್ಳ ಅಪ್ಪ ಅವ್ಳ ಪಾಲಿಗೆ ಸತ್ತಾಂಗೆತಾ ನಿರ್ಧಾರ ಮಾಡ್ತ್.

ಜೀವ ಇರ್ಕನ ಅಮ್ಮ ಆಸೆಪಟ್ಟ ಹಸ್‌ರ್ ಬಣ್ಣದ ಸೀರೆ ಅಮ್ಮನ ಹೆಣದ ಪಾಲಾತ್. ಅಮ್ಮನ ದೇಹದೊಟ್ಟಿಗೆ ಅಮ್ಮನ ಪ್ರೀತಿಯ ಸೀರೆಸ ಕಿಚ್ಚ್‌ನ ಉರಿಲಿ ಸುಟ್ಟ್ ಬೂದಿಯಾತ್.

ಜೀವನದ ಮ್ಯಾಲೆ ಭರವಸೆ ಇಟ್ಟ್‌ಕಂಡಿದ್ದ ಜೆಳ್ಳಿಗೆ ಜೀವನನೇ ಬ್ಯಾಡತಾ

ಅನ್ಸಿಕೆ ಸುರಾತ್. ಅಮ್ಮನ ಸಾವು, ಪಟೇಲನ ವಕ್ರದೃಷ್ಟಿ, ಅಪವಿತ್ರಾದ ತನ್ನ ದೇಹ ಎಲ್ಲನ ನೆನ್ಸಿಕಂಡ್ ಬೆಳ್ಳಿ, ಸಾವು ಒಂದೇ ಇನ್ ಉಳ್ದ ದಾರಿತಾ ಬಾಮಿಹತ್ರ ನಡ್ತ್. ಇನ್ನೇನ್ ಬಾಮಿಗೆ ಹಾರಕೂತಾ ಇರ್‌ಕಕನ ಯ್ಯಾರೋ ಬೆಳ್ಳಿನ ಕೈಹಿಡ್ದ್ ಎಳ್ಟಂಗೆ ಆತ್. ತಿರ್‌ಗಿ  ನೋಡ್ರೆ, ಒಬ್ಬ ಪೋರ್ಲುನ ಹೈದ.

ಆ ಹೈದ ನೆರೆಹಳ್ಳಿನ ಪಟೇಲನ ಮಂಜ ರಾಮು. ರಾಮುಗೆ ಬೆಳ್ಳಿ ಬಗ್ಗೆ ಎಲ್ಲಾ ವಿಷ್ಯ ಲಾಯ್ಕ ಗೊತ್ತಿತ್. ಬೆಳ್ಳಿನ ಮುಖ ಲಕ್ಷಣ ಹಂಗೆ ಒಳ್ಳೆ ನಡ್‌ವಳಿಕೆಗೆ ಯಾಗೊಲೋ ಮನಸ್‌ಕೊಟ್ಟ ಹೈದ ಅವ. ಬೆಳ್ಳಿನ ಎರಡ್ ಕೈಗಳ್‌ನ ಹಿಡ್ದ್, ಬೆಳ್ಳಿಗೆ ಹೊಸ ಜೀವ್‌ನ ಕೊಡೋ ಆಶ್ವಾಸನೆ ಕೊಟ್ಟತ್ತ್. ಬೆಳ್ಳಿ ಅವ್‌ಳ ಜೀವಂದಲಿ ಎದ್ರಾದ ಎಲ್ಲಾ ತೊಂದರೆಗಳನ್ನ ಯಾವ್‌ದೇ ಮುಚ್ಚ್‌ಮರೆ ಇಲ್ಲದಾಂಗೆ ರಾಮುನ ಮುಂದೆ ಬಿಚ್ಚಿಟ್ಟತ್. ರಾಮು ಬಾರೀ ಖುಸೀಲೆ ಬೆಳ್ಳಿನ ಸ್ವೀಕಾರ ಮಾಡ್ತ್.

ಇತ್ತ ರಾಮುನ ಮನೆಯವು ಬೆಳ್ಳಿನ ಸೊಸೆತ ಒಪ್ಪಿಕೆ ತಯಾರಿತ್ಲೆ.ರಾಮು ಬೆಳ್ಳಿಗೆ ಅರ್‌ಶ್‌ನ ಕೊಂಬು ದಾರನ ಕಟ್ಟಿ, ಹೆಣ್ಣ್‌ತ ಸ್ವೀಕಾರ ಮಾಡಿ ಬೇರೆ ಊರ್‌ಗೆ ಕರ್‌ಕಂಡ್ ಹೋತ್. ಕಡೆಪಕ್ಷ ಬೆಳ್ಳಿ ಬಾಳ್‌ಲಿ ಕಿಚ್ಚ್‌ನ ಉರಿ ಹಂಞ ಕಡಿಮೆಯಾದಂಗೆ ಕಂಡತ್.

ವರ್‌ಸಗ ಕಳ್‌ದೋ. ಆದ್ರೆ ಬೆಳ್ಳಿ ಬಾಳ್‌ಲಿ ಕತ್ಲೆನ ನೆರ್‌ಳ್ ಅವ್‌ಳ್‌ನ ಬೆನ್ನ್ ಬಿಡದೇ ಕಾಡ್ ತಾನೇ ಇತ್ತ್. ಬೆಳ್ಳಿ ಮಕ್ಕ ಆಗೋ ಅದೃಷ್ಟಾಂದ ದೂರ ಇತ್ತ್. ಅದ್‌ಕೆ ಗಂಡ-ಹೆಣ್ಣ್ ಸೇರಿಕೂಸ್‌ವೊಂದ್‌ನ ದತ್ತ್ ತಕಣ್ವ ತೀರ್ಮಾನಕ್ಕೆ ಬಂದೋ.

ಬೆಳ್ಳಿ, ರಾಮು ಹಂಗೆ ಅವ್‌ರ ದತ್ತ್‌ಮಂಜ ವಿಜಯ ಖುಸೀಲಿ ಬಾಳ್ ನಡ್‌ಸ್ತಾ ಇದ್ದೋ. ಬೆಳ್ಳಿನ ಬಾಳ್ ಇನ್ನೇನ್ ಸರಿದಾರಿಲಿ ಹೋಗ್ತಾ ಉಟ್ಟ್ ಅನ್‌ಸೋ ಹೊತ್ತಿಗೆ ಇನ್ನೇನೊ ನಡ್ದ್ ಹೋತ್.

ಪ್ಯೇಟೆಗೆ ಹೋದ ರಾಮು ಮನೆಗೆ ಬಂದದ್ ಹೆಣಾ ಆಗಿ. ರಸ್ತೆ ಅಪಘಾತಲಿ ಗಂಡ ಬಾರದ ಲೋಕಕೆ ಹೋತ್‌ತ ವಿಷ್ಯ ತಿಳ್‌ದ ಬೆಳ್ಳಿ ಕುಸ್‌ದೇ ಬಿಟ್ಟತ್. ಬಾಳ್ ಬೆಳ್‌ಗಿಕೆ ಬಂದದ್ಯಾವರೇ ಅವ್‌ಳ ಕೈ ಬಿಟ್ಟ್ ಹೋಗಿಬಿಡ್ತ್‌ತ ಹೇಳ್ವೊನ ನಂಬಿಕೆ ತುಂಬಾನೆ ಕಷ್ಟ ಎನ್‌ಸಿತ್. ಬೆಳ್ಳಿನ  ಬಾಳ್ ಪುನಃ ಕಿಚ್ಚ್‌ನ ಉರಿಲಿ ಬೆಂದತ್. ಗಂಡನ ಆಸೆನ ಪೂರೈಸಕು. ಮಂಜನ ಡಾಕ್ಟರ್ ಮಾಡೇ ಮಾಡಕುತಾ ಪಣ ತೊಟ್ಟತ್.

ಅದೆಷ್ಟೋ ವರ್‌ಸಗ ಕಳ್‌ದೋ. ಸಾಯ್‌ಂಕಾಲ ತನ್ನ ಮಂಜಂಗಾಗಿ ಸೆಟ್‌ರ್ ಹೊಲ್‌ದ್‌ಕಂಡ್ ಬೆಳ್ಳಿ ಕುರ್ಚಿಲಿ ಕುದ್ದಿತ್. ಮಂಜ ವಿಜಯ ಬಾರೀ ಖುಸೀಲಿ ಅಮ್ಮನ ಕಾಲಿಗೆ ಅಡ್ಡಬಿದ್ ಬಾಯ್‌ಗೆ ಸಿಹಿ ತಿಂಡಿನ ತಿನ್‌ಸಿತ್. ಆಗ ಬೆಳ್ಳಿ ಕೇಳ್ತ್

“ಏನ್ ಕಂದ ಬಾರೀ ಖುಸೀಲಿ ಒಳ?” ವಿಜಯ ಹೇಳ್ತ್ “ಅಮ್ಮ ಕೊನೆ ವರ್ಷದ ವೈದ್ಯಕೀಯ ಪರೀಕ್ಷೆಲಿ ನಂಗೆ ರಾಜ್ಯಕೆನೆ ಮೊದಲ ರ್‍ಯಾಂಕ್ ಬಂದುಟ್ಟು ಅಮ್ಮ”.

ಸುದ್ದಿ ಕೇಳ್‌ದಾಂಗೆ ಬೆಳ್ಳಿನ ಕಣ್ ತುಂಬಿಬಿಡ್‌ತ್. ಗಂಡನ ಕಳ್‌ಕಂಡ ಮೇಲೆ ಬೆಳ್ಳಿ ಬದ್‌ಕಿದೇ ಮಂಜಗಾಗಿ. ಭೂಮಿಗೆ ಬಂದಲ್ಲಿಂದ ಬರೀ ಕಿಚ್ಚ್‌ನ ಉರಿಲೇ ಬೆಂದ ಬೆಳ್ಳಿನ ಅದ್ಯಾವ ಕನಸ್ ಕೂಡ ನನ್‌ಸೇ ಆಗಿತ್ಲೆ. ಮಕ್ಕ ಇಲ್ಲೆತ ಇದ್ದ ಬ್ಯಾಜರನ ಕಳ್‌ದ್ ಬಾಳ್‌ಗೆ ಅರ್ಥ ಕೊಟ್ಟ ಮಂಜನ ಮುಖನ ದಿಟ್ಟಿಸಿ ನೋಡಿ ಅಲ್ಲೇ ಕುಸ್‌ದ್ ಬಿಟ್ಟತ್.

ವಿಜಯ ಅಮ್ಮ........ ತಾ ಮರ್ಡತಾ ಅಮ್ಮನ ತೊಡೆ ಮೇಲೆ ಮಲ್‌ಗ್‌ಸಿಕೊಂಡತ್. ಬೆಳ್ಳಿನ ಕಣ್ಣ್‌ಲಿ ಖುಸೀನ ಕಣ್ಣೀರ್ ಸುರೀತ ಇತ್ತ್.

“ಕಂದಾ ನಿನ್ನ ತೊಡೆ ಮೇಲೆ ಪ್ರಾಣ ಬಿಡೋ ಪುಣ್ಯ ನನ್‌ಗೆ ಉಟ್ಟು.ಇಂದ್ ನನ್ನ ಬಾಳ್‌ನ ಅತಿ ದೊಡ್ಡ ಕನ್‌ಸ್ ನನ್‌ಸಾಗುಟ್ಟು. ನಾನ್ ಇಷ್ಟ್‌ದಿನ ಬದ್‌ಕಿದೇ ನಿನ್ನ ಈ ಸಾಧನೆ ನೋಡಿಕೆ ಕೂಸು. ಗೂಡೆಯಾಗಿ ಹುಟ್ಟಿ ಕಷ್ಟಗಳ್‌ನ್ನೇ ಸರಮಾಡಿ ಹಾಕಂಡವಳ್ ನಾನ್. ಆದ್ರೆ ನನ್ನ ಕೊನೆಗಾಲ್‌ದಲ್ಲಿ ನೀನ್ ನಂಗೆ ಸಾಧನೆತಾ ಹೇಳೋ ವಜ್ರದ ಕೀರಿಟನೆ ತೊಡಿಸಿಬಿಟ್ಟಾ. ನಾನ್ ಬೆಳ್ಳಿ....... ಕಿಚ್ಚ್‌ನ ಉರಲಿ ಸದಾ ಬೆಂದ ಬೆಳ್ಳಿ... ನನ್ನ ಕಷ್ಟಗ ಇಂದ್ ನನ್ನೊಟ್ಟಿಗೇನೇ ಸುಟ್ಟ್ ಬೂದಿಯಾಗ್ಲಿ. ನನ್ನ ದೇಹನ ನಿನ್ನ ತಂದೆನ ದೇಹದ ಜೊತೆನೇ ಮಣ್ ಮಾಡ್. ನಾ ಹುಟ್ಟಿದ ಊರ್‌ಲಿ ಯಾವ್‌ದೇ ಬ್ಯಾದಭಾವ ಮಾಡದೆ ಸೇವೆ ಮಾಡ್. ವಿಜಯ.....ಕಂದಾ ನೀನ್ ಯಾಗಳು ವಿಜಯದ ಹಾದಿಲೇ ನಡಿಕಂದಾ..... ತಾ ಹೇಳ್‌ಕಂಡ್ ಬೆಳ್ಳಿ ದೇವ್‌ರ ಪಾದಗಳ್‌ನ ಸೇರಿಬಿಡ್ತ್. ಅವಳ ಜೊತೆ ಅವಳ್ನ ಯಾಗಲೂ ಸುಡ್‌ತಾ ಇದ್ದ ಕಿಚ್ಚ್‌ನ ಉರಿಸ ಆರಿಹೋತ್.

ವಿಜಯ ಅಮ್ಮನ ಆಸೆನೆಲ್ಲಾ ಈಡೇರ್‌ಸಿತ್. ಬೆಳ್ಳಿ ಹುಟ್ಟಿದ ಊರ್‌ಲಿ “ಬೆಳ್ಳಿ ಧರ್ಮಾಸ್ಪತ್ರೆ”ತಾ ದೊಡ್ಡ ಆಸ್ಪತ್ರೆನ ಕಟ್‌ಸಿತ್. ಸ್ವರ್ಗದಿಂದ್‌ಲೇ ಬೆಳ್ಳಿ ಎಲ್ಲನ ನೋಡ್ತಾ ಮಂಜನ ಆಶೀರ್ವಾದ ಮಾಡ್ತ್. ಇಡೀ ಬಾಳ್‌ಲಿ ಕಿಚ್ಚ್‌ನ ಉರಿಲಿ ಬೆಂದ ನಮ್ಮ ಕತಾನಾಯ್‌ಕಿ ಬೆಳ್ಳಿ, ಜನ್‌ರದೃಷ್ಟಿಲಿ ಕೊನೆತಂಕನೂ ನಾಯಕಿಯಾಗಿಯೇ ಉಳ್‌ತ್.

---

**ಓಂಶ್ರೀ ದಯಾನಂದ, ಕೂಡಕಂಡಿ**
ಮಡಿಕೇರಿ
ಮೊಬೈಲ್ ಸಂಖ್ಯೆ : 6363376487

# ಬಡಿಗೆ ಕೊಟ್ಟೊ! ಬಡ್ಸಿ ಕಂಡೊ!



**ಹೊಳೆಕರೆ ಚಿಂಗಪ್ಪ**

**ಗಪ್ಪುದ್ ಚಿಂತೆ!**

ದನ ನೋಡಿಕಂಡ್ ಗದ್ದೆ ಬರೀಲಿ ಕುದ್ದಗಪ್ಪುದು ಮುಂದೆ ಗಿಣಿಪಕ್ಷಿ, ಒಂದ್ ಬತ್ತದ ತೆನೆನ ಕಚ್ಚಿಕಂಡ್ ಹಾರಿಯೋತ್. ಸಲ್ಪ ಹೊತ್‌ಗೆ ಮುಂದೆ ತೆನೆ ಗದ್ದೆಲಿ ಇತ್, ಈಗ ಆ ತೆನೆ ಮಾಯ! ಆಗಲೇ ಗಪ್ಪುಗ್ಯಾನ ಮಾಡ್ಕೆ ಸುರು ಮಾಡ್ದೆ! ಅಲಾ! ನಂಗೆ ಪ್ರಾಯ ಮೂವತ್ ಆತ್. ನಾನ್ ಅರ್‌ವತ್ ವರ್ಷ ಮಾತ್ರ ಬದ್ಕಿನೇಂತ ಸಾಸ್ತ್ರದಂವ ಗೋಣಿಕೊಪ್ಪ ಸಂತೆಲಿ ಮೊಕ ನೋಡಿ ಹೇಳ್ತ್! ಅಂದರೆ ಇನ್ನ್ ಮೂವತ್ ವರ್ಷ ಭೂಮಿ ಮೇಲೆ ಇದ್ದನೆ! ಇಂದಿಗೆ ಮೂವತ್ತೊಂದ್ ವರ್ಷದ ಕೆಳ್ಗೆ ನಾನ್ ಇತ್ಲೆ! ಇನ್ನ್ ಮೂವತ್ತೊಂದ್ ವರ್ಷ ಆದ ಮೇಲೆ ನಾನ್ ಇರ್‌ದುಲ್ಲೆ! ಹುಟ್ಟಿಕಿಂತ ಮುಂದೆ ನಾನ್ ಏನಾಗಿದ್ದೆ? ಸತ್ತ ಮೇಲೆ ನಾನ್ ಏನಾನೆ? ನಾನ್ ಯಾರ್? ಬದ್ಕ್‌ಗಡ, ಪ್ರಪಂಚಗಡ, ದೇವ್ರ್‌ಗಡ! ಗ್ಯಾನ ಮಾಡಿರೆ ತಲೆ ಬುಡ ಒಂದೂ ಅರ್ಥ ಆದ್‌ಲೆ!

**ಪುನರ್ಜನ್ಮ**

ಈ ಹುಟ್ಟು-ಸಾವುನ ಸಂಗತಿ ಯಾರಿಗೂ ಸರಿಯಗಿ ಗೊತ್ಲೆ. ಏಕೆತೇಳಿರೆ ಸತ್ತವ್ ಯಾರೂ ಎದ್ ಬಂದ್ ಹೇಳ್‌ತ್ಲೆ. ಹಿರಿಯವ್ ಹೇಳ್ವೆ, ನಾವ್ ಹಿಂದೆದ್ ಜನ್ಮಗಳ್‌ಲಿ, ಮನ್ಸ ಜನ್ಮನೋ, ಪ್ರಾಣಿ ಜನ್ಮನೋ ಆಗಿ ಸತ್ ಈಗ

ಇಲ್ಲಿ ಹುಟ್ಟಿಯೋಗಡ! ನಮ್ಗ ಕಷ್ಟ ಬಂದರೆ ಅದ್ ಹಿಂದೆನ ಜನ್ಮಲಿ ಮಾಡ್ದ ಪಾಪದ ಪಲ. ಸುಕ ಬಂದರೆ ಅದ್ ಹಿಂದೆದ್ ಜನ್ಮಲಿ ಮಾಡ್ದ ಪುಣ್ಯದ ಪಲ! ಹಳೇ ಬಟ್ಟೆನ ಬಿಸಾಕಿ ಹೊಸ ಬಟ್ಟೆನ ಹಾಕಣುವಂಗೆ ಸತ್ತ ಮೇಲೆ ಆತ್ಮ ಈ ಸರೀರನ ಬುಟ್ಟ್ ಬೇರೆ ಸರೀರನ ಸೇರಿ ಪನರ್ಜನ್ಮ ಪಡ್ದದೆಗಡ! ಬಿಜ್ಜೊಬ್ಬ ಹೇಳ್ವೆ ಪುನರ್ಜನ್ಮ-ಗಿನರ್ಜನ್ಮ ಎಂತದೂ ಇಲ್ಲೆ! ಮನ್ಸನೋ, ಪ್ರಾಣಿಯೊ ಒಂದ್ ಸಲ ಸತ್ತರೆ ಅದರ ಸರೀರ ಪಂಚಭೂತಗಳ ಜೊತೆ ಸೇರಿಹೋದೆ. ಭೂಮಿ, ನೀರ್, ಬೆಂಕಿ, ಗಾಳಿ, ಆಕಾಸಗಳೇ ಆ ಪಂಚಭೂತಗ. ಸರೀರಲಿ ಇರ್ವ ಮೂಳೆ, ಮಾಸ ಭೂಮಿಲಿ ಮಣ್‌ಗೆ ಸೇರಿ ಮಣ್ ಆದೆ. ರಕ್ತ ಮತ್ತ್ ನೀರ್, ನೀರ್‌ಗೆ ಸೇರಿ ನೀರಾದೆ. ಮೈಲಿದ್ದ ಉಷ್ಣ ಬೆಂಕಿ ಜೊತೆ ಸೇರಿ ಬೆಂಕಿ ಆದೆ. ಸರೀರಲಿ ಇದ್ದ ಉಸುರ್ ಗಾಳಿ ಜೊತೆ ಸೇರಿ ಗಾಳಿ ಆದೆ. ಜುಂವ ಆಕಾಸ ಜೊತೆ ಸೇರಿ ಆಕಾಸ ಆದೆ!

**ಮಕ್ಕಳೇ ಪನರ್ಜನ್ಮ**

ಒಂದ್ ಮರದ ಬೀಜದೊಳಗೆ ಇಡೀ ಮರ ಸೂಕ್ಷ್ಮರೂಪಲಿ ಇದ್ದದೆ. ಮರದ ಬೀಜ ನೆಲಕ್ಕೆ ಬಿದ್‌ಗಿಡ ಆಗಿ ಬೆಳ್ದ್ ಒಂದ್ ಹೊಸ ಮರ ಆದೆ. ಆ ಹಳೇ ಮರಒಂದ್ ದಿನ ಕುಂಬಾಗಿ ಬಿದ್ ಹೋದೆ. ಆ ಹಳೇ ಮರ ಪುಷ್ಟಿಯಾಗಿದ್ದರೆ ಹೊಸ ಮರ ಲಾಯ್ಕಾಗಿ ಬೆಳ್ದದೆ. ಇಲ್ಲದಿದ್ದರೆ ಸರಿಯಾಗಿ ಬೆಳಿಯದೆ ಸೊರ್‌ಗಿ ಕಂಡ್ ಗಾಳಿ ಬೀಸಿರೆ ಬೀಳುವಂಗೆ ಇದ್ದದೆ. ಹೊಸ ಮರ ಲಾಯ್ಕಾಗಿ, ಇಲ್ಲೆ ಸೊರ್‌ಗಿ ಕಂಡ್ ಇರ್ಕ ಆ ಹಳೇ ಮರದ ಬೀಜದ ಗುಣಮಟ್ಟ ಹೆಂಗೆ ಕಾರಣನೋ, ಹಂಗೆ ಮನ್ಸನ ಕಷ್ಟ ಸುಕಗಳ್ಗೆ ಅವರ ಹೆತ್ತವ್ ಮಾಡ್ದ ಪಾಪ ಪುಣ್ಯಗಳೇ ಕಾರಣ. ಹಳೇ ಮರ ಕುಂಬಾಗಿ ಬಿದ್ದ ಮೇಲೆ ಹೆಂಗೆ ಚಿಗುರುದಿಲ್ಲೆಯೋ ಹಂಗೆ ಮನ್ಸನೂ ಸತ್ತ ಮೇಲೆ ಮತ್ತೆ ಹುಟ್ಟುದ್ಲೆ. ಮಕ್ಕಳೇ ಪುನರ್ಜನ್ಮ!

**ಸಾಮಾನ್ಯ ನಂಬಿಕೆ**

ಜನಸಾಮಾನ್ಯರ ನಂಬಿಕೆ ಏನ್‌ತೇಳಿರೆ, ಮನ್ಸ ಒಳ್ಳೆ ಕೆಲಸ ಮಾಡಿರೆ ಸತ್ತ ಮೇಲೆ ಸ್ವರ್ಗಕ್ಕೆ ಹೋದೆ. ಕೆಟ್ಟ ಕೆಲ್ಸ ಮಾಡಿರೆ ನರಕಕ್ಕೆ ಹೋದೆ. ಮಾಡ್ದ ಪುಣ್ಯ ಪಾಪಕ್ಕೆ ಸರಿಯಾಗಿ ಸ್ವರ್ಗ ನರಕಲಿ ಪಲ ಅನುಭವಿಸಿ ಪುನ ವಾಪಸ್ ಭೂಮಿಲಿ ಮನ್ಸ ಆಗಿಯೋ, ಪ್ರಾಣಿ ಆಗಿಯೋ,

ಪಕ್ಷಿಯಾಗಿಯೊ, ಕ್ರಿಮಿಕೀಟ ಆಗಿಯೋ ಹುಟ್ಟಿದೆ! ಮನ್ಸನ ಹತ್ರ ಏನೇನೋ ಆಸೆಗ ಇದ್ದವೆ. ಎಲ್ಲಾ ಆಸೆಗ ತೀರುವವರೆಗೆ ಜನ್ಮ ಎತ್ತಿ, ಎಲ್ಲಾ ಆಸೆಗ ತೀರ್ದ ಮೇಲೆ ಹುಟ್ಟ್ ಸಾವ್ ಇಲ್ಲದ ಲೋಕಕ್ಕೆ ಹೋದೆ! ಅಂದರೆ ಮೋಕ್ಷ ಪಡ್ದದೆ!

**ಮೋಕ್ಷ**

ಮನ್ಸ ಮೋಕ್ಷ ಪಡಿಯದುತೇಳಿರೆ ಅರ್ಥ ನಾನು ಇಲ್ಲದಾದು. ಅದ್ಕೆ ಸಾವ್ ನಾನು ಯಾರ್‌ತ ತಿಳ್ಕಣಕು. ನಾನು ತೇಳಿರೆ ಸರೀರನ? ಸರೀರದ ವಿಷಯ ಬಾಕನ ಇದ್ ನನ್ನ ಸರೀರತ ಹೇಳುವೆ. ಅಂದರೆ ಇಲ್ಲಿ ನಾನು ಬೇರೆ ಸರೀರ ಬೇರೆ, ಅಂದರೆ ನಾನು ಸರೀರ ಅಲ್ಲ. ನಾನು ತೇಳಿರೆ ಮನ್ಸ್‌ನ? ಮನ್ಸ್‌ದ್ ವಿಷಯ ಬಾಕನ ಇದ್ ನನ್ನ ಮನ್ಸ್‌ತ ಹೇಳುವೆ. ಇಲ್ಲಿ ನಾನು ಬೇರೆ ಮನ್ಸ್ ಬೇರೆ. ಅಂದರೆ ನಾನು ಮನ್ಸ್ ಅಲ್ಲ. ನಾನುತೇಳಿರೆ ಬುದ್ಧಿಯ? ಬುದ್ಧಿದ್ ವಿಷಯ ಬಾಕನ ಇದ್ ನನ್ನ ಬುದ್ಧಿತ ಹೇಳುವೆ. ಇಲ್ಲಿ ನಾನು ಬೇರೆ ಬುದ್ಧಿ ಬೇರೆ. ಅಂದರೆ ನಾನು ಬುದ್ಧಿ ಅಲ್ಲ. ಮತ್ತೆ ನಾನುತೇಳಿರೆ ಆತ್ಮನಾ? ಆತ್ಮದ ವಿಷಯ ಬಾಕನ ಇದ್ ನನ್ನ ಆತ್ಮತ ಹೇಳುವೆ. ಇಲ್ಲಿ ನಾನು ಬೇರೆ ಆತ್ಮ ಬೇರೆ. ಅಂದರೆ ನಾನು ಆತ್ಮ ಅಲ್ಲ.

**ಪ್ರತಿಫಲ**

ನಾನು ಸರೀರ ಅಲ್ಲ, ಮನ್ಸ್ ಅಲ್ಲ, ಬುದ್ಧಿ ಅಲ್ಲ, ಆತ್ಮ ಅಲ್ಲ ಮತ್ತೆ ನಾನು ಯಾರ್! ಒಂದೊಂದ್ ಸಲ ನಮಿಗೆ ಕಷ್ಟ ಬಾಕನ ಹೇಳಿ ಕಂಡವೆ ನಾನು ಪಾಪಿ! ಅದೇ ಸುಕ ಇರ್ಕನ ಹೇಳಿಕಂಡವೆ ನಾನು ಪುಣ್ಯವಂತ! ಈ ಪಾಪ ಪುಣ್ಯಗ ನಾವು ಮಾಡುವ ಕೆಲ್ಸಗಳಿಗೆ ನಮಿಗೆ ಸಿಕ್ಕುವ ಪ್ರತಿಫಲ. ಇಲ್ಲಿ ನಾನು ಬೇರೆಯಲ್ಲ ಪಾಪಿ ಬೇರೆಯಲ್ಲ, ನಾನು ಬೇರೆಯಲ್ಲ ಪುಣ್ಯವಂತ ಬೇರೆಯಲ್ಲ. ನಾನು ಪಾಪಿಯೂ ಹೌದು. ನಾನು ಪುಣ್ಯವಂತನೂ ಹೌದು.ಅಂದರೆ ನಾನು ಯಾರು? ನಾನು ಪ್ರತಿಫಲ. ಮನ್ಸ ಸತ್ತಮೇಲೆ ಪ್ರತಿಫಲ ಮಾತ್ರ ಉಳ್ಕಂಡವೆ .ಪ್ರತಿಫಲ ಇರುವವರೆಗೂ ಮನ್ಸ, ಜೀವನಚಕ್ರಲಿ ಸುತ್ತುತ್ತಾ ಇದ್ದವೆ. ಶ್ರೀ ಕೃಷ್ಣ ಪರಮಾತ್ಮ ಭಗವದ್ಗೀತೆಲಿ ಹೇಳ್ದಂಗೆ ನಿಷ್ಕಾಮ ಕರ್ಮಯೋಗನ ಮಾಡ್ತ

ಪ್ರತಿಪಲ ಇಲ್ಲದಾದೆ, ಅಂದರೆ ನಾನು ಇಲ್ಲದಾದೆ.

**ಆರಂಬ**

ಓಬೀರಾಯನ ಕಾಲಕ್ಕಿಂತ ಮುಂದೆ ಮನ್ಸ, ಕಾಡ್‌ಲಿ ಬೇಟೆ ಆಡಿಕಂಡ್, ಗೆಂಡೆಗೆಣ್ಸ್ ತಿಂದ್ಕಂಡ್ ಒಂದ್ ಕಡೆ ನಿಲ್ಲದೆ ಸುತ್ತಾಡಿಕಂಡ್ ಜೀವನ ಮಾಡ್ತಾ ಇತ್. ಬುದ್ದಿ ಬೆಳ್‌ದಂಗೆ ಪ್ರಕೃತಿ ನಿಯಮನ ತಿಳಿಯಕೆ ಸುರು ಮಾಡ್ದೆ. ನೆಲದೊಳಗೆಂದ ಬೀಜ ಮೊಳ್ಕೆ ಹೊಡ್ದ್ ಗಿಡ ಆದುನ್ನ ನೋಡಿ ಭೂಮಿಲಿ ಬೀಜ ಬಿತ್ತಿ ಬೆಳೆ ಬೆಳಿಯಕ್‌ತ ತಿಳ್‌ಕಂಡದೆ. ನೀರ್ ಇದ್ದರೆ ಮಾತ್ರ ಮೊಳ್ಕೆ ಹೊಡ್ಡ್ ಗಿಡ ಆದೆಂತೇಳುವ ಸಂಗತಿನ ಮಳೆ ಬೀಳ್ಬುನ ನೋಡಿ ತಿಳ್ಕಂಡದೆ. ಕಾಡ್, ಕಲ್‌ದ್ ದೊಡ್ಡ ಮಾಳೆ, ಮರದ್ ಪೊಟರೆ ಒಳಗೆ ವಾಸ ಮಾಡ್ತಾ ಇದ್ದಂವ ನೀರ್ ಹುಡಿಕಿ ಕಂಡ್ ಹೊಳೆಕರೆಗೆ ಬಂದದೆ. ಮರದ ನಾರ್, ಸೊಪ್ಪುಂದ ಮೈ ಮುಚ್ಚಿಕಂಡದೆ, ಮಳೆ ಗಾಳಿ ಬರದಂಗೆ ಮರದ ಕೊಂಬೆ ಎಲೆಗಳ್‌ಂದ ಅಟ್ಟಪಾಳಿ ಕಟ್ಟಿಕಂಡದೆ. ನೆಲನ ಅಗ್ದ್‌ಆರಂಬ ಮಾಡಿಕೆ ಸುರು ಮಾಡ್ದೆ.

**ಬಡ್ಗಿ ಕೊಟ್ಟೊ**

ಆ ಕಾಲಲಿ ಸಲ್ಪ ಜನಗ ಕೆಲ್ಸ ಮಾಡಿ ಬೆಳೆ ಬೆಳ್ದ್ ಹೊಟ್ಟೆ ತುಂಬಿಸಿ ಕಂಡರೆ ಇನ್ನ್ ಸಲ್ಪ ಜನಗ ಅವ್ ಬೆಳ್ದ ಬೆಳೆನ ಕಿತ್‌ಕಂಡ್ ಹೊಟ್ಟೆ ತುಂಬಿಸಿ ಕಂಡವೆ. ಈ ಕಿತ್‌ಕಂಡ್ ತಿನ್ನುವವರ ಉಪದ್ರ ಮಿತಿ ಮೀರಿಕನ ಕಷ್ಟ ಪಡುವ ಜನಗ ಎಲ್ಲಾ ಸೇರಿ ಅವರ ಪೈಕಿ ಗಟ್ಟಿಮುಟ್ಟು ಇರುವ ಒಬ್ಬ ನಂಬಿಕಸ್ತನ ಕೈಗೆ ಬಡಿಗೆ ಕೊಟ್ ಪಾರಕ್ಕೆ ಮಡ್‌ಕಂಡವೆ, ಅಂವನ ಜೀವನಕೆ ಬೇಕಾದ ಎಲ್ಲಾ ಏರ್ಪಾಡ್‌ನ ಮಾಡಿಕೊಟ್ಟವೆ!

**ಬದ್ಕ್**

ಕಡ್ಕೆಲಿರುವ ಕಾಳ್ ಕಡ್ಡಿನ ಕಾಯಕೆ ಕರಾರ್ ಆತ್! ಹೊಟ್ಟೆ ತುಂಬಾ ಉಂಬಕಿರುವ ವ್ಯವಸ್ತೆ ಆತ್. ದುಡಿಯದು, ತಿಂಬಂದು ಇಷ್ಟಕ್ಕೆ ಬದ್ಕ್ ಆತ? ಇನ್ನೇನಾದರ್ ಉಟ್ಟಾಂತ ಸೋದನೆ ಮಾಡಿಕೆ ಸುರು ಮಾಡ್ದೆ. ತಾವ್ ಮಾಡುವ ಪ್ರತಿಯೊಂದ್ ಕೆಲ್ಸಕ್ಕೆ ಒಂದ್ ಉದ್ದೇಸ ಇದ್ದದೇಂತ ತಿಳ್ಕಂಡವೆ. ದುಡಿಯುವ ಉದ್ದೇಸ ಅನ್ನ ಮತ್ತೆ ವಸ್ತುಗಳ್‌ನ ಪಡ್ಕಣೆಕೆ.

ಅನ್ನ ತಿನ್ನುವ ಉದ್ದೇಸ ಪ್ರಾಣನ ಉಳ್ಸಿಕಣ್ಕೆ. ವಸ್ತುಗಳ್‌ನ ಪಡ್ಕಣುವ ಉದ್ದೇಸ ನೆಮ್ಮದಿಂದ ಬದ್ಕಿಕೆಂತ ತಿಳ್ಕಂಡವೆ. ದುಡಿಯದು ತಿಂಬಂದುರ ಉದ್ದೇಸ ಬದ್ಕಿಕೆಂತ ಗೊತ್ತಾದ ಮೇಲೆ ಅವ್ಕೆ ಬಂದ ಕಡೇ ಪ್ರಶ್ನೆ ಬದ್ಕ್‌ವ ಉದ್ದೇಸ ಏನ್‌ತ?

## ಬದ್ಕ್‌ನ ಉದ್ದೇಸ

ಬದ್ಕ್ ಮಾಡುವ ಉದ್ದೇಸ ಏನ್‌ತೇಳಿ ಚಿಂತನೆ ಮಾಡಿ-ಮಾಡಿ ಒಂದ್ ದಿನ ಅವರ ಪ್ರಶ್ನೆಗೆ ಉತ್ತರ ಕಂಡ್ ಕಂಡೊ. ಧರ್ಮ, ಅರ್ಥ, ಕಾಮ, ಮೋಕ್ಷ ಈ ಚತುರ್ವಿದ ಪುರುಷಾರ್ಥ ಸಾಧನೆ ಮಾಡ್ದು ಮನ್ಸಜನ್ಮದ ಉದ್ದೇಸಾಂತ ತಿಳ್ಕಂಡವೆ. ಮನ್ಸಂಗೆ ಬದ್ಕಿಕೆ ಊಟ, ಬಟ್ಟೆ, ಮನೆ, ಗಂಡ್‌ಗೆ ಹೆಣ್ಣ್, ಹೆಣ್ಣಿಗೆ ಗಂಡ್, ವೈರಿಗಳ್‌ಂದ ರಕ್ಷಣೆ, ಇವೆಲ್ಲದರ ಅವಶ್ಯಕತೆ ಇದ್ದದೆ. ಇವೆಲ್ಲ ಪಡಿಯೊಕರೆ ಕೆಲ್ಸ ಮಾಡಿದುಡ್ ಸಂಪಾದನೆ ಮಾಡೋಕು. ಅರ್ಥತೇಳ್ರೆ ದುಡ್ಡು. ಕಾಮತೇಳ್ರೆ ಅವಶ್ಯಕತೆಗ.ದುಡ್‌ನ ನ್ಯಾಯರೀತಿಂದ ಸಂಪಾದನೆ ಮಾಡಿ ಅವಶ್ಯಕತೆನ ರೀತಿ ನೀತಿಂದ ಪೂರೈಸಿಕಂಬದೇ ಧರ್ಮ. ಧರ್ಮ, ಅರ್ಥ, ಕಾಮ ಈ ಪುರುಷಾರ್ಥ ಗಳ್‌ಲಿ ಪಾಸ್ ಆದರೆ ಅದೇ ಮೋಕ್ಷ.

## ಮೌಲ್ಯಾಧಾರಿತ ಶಿಕ್ಷಣ ಮತ್ತೆ ಬದ್ಕ್

ಚತುರ್ವಿದ ಪುರುಷಾರ್ಥನ ಸಾದಿಸಿಕೆ, ಭಾಷಾಶಾಸ್ತ್ರ, ಕೌಶಲ್ಯಶಾಸ್ತ್ರ, ನೀತಿಶಾಸ್ತ್ರ, ತತ್ವಶಾಸ್ತ್ರ ಈ ನಾಲ್ಕ್‌ತರದ 'ಮೌಲ್ಯಾಧಾರಿತ ಶಿಕ್ಷಣ'ನ ಮತ್ತೆ ಭಕ್ತಿಯೋಗ, ಕರ್ಮಯೋಗ, ರಾಜಯೋಗ, ಸನ್ಯಾಸಯೋಗ ಈ ನಾಲ್ಕ್‌ತರ ಯೋಗಗಳೊಟ್ಟಿಗೆ ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಸನ್ಯಾಸತೇಳುವ ಒಂದ್ 'ಮೌಲ್ಯಾಧಾರಿತ ಬದ್ಕ್'ನ ಆಗನ ಕಾಲಲಿ ರೂಡಿ ಮಾಡಿಕಂಡಿದ್ದೊ.

## ಜೀವನಕ್ರಮ

ಮಕ್ಕ, ಬ್ರಹ್ಮಚರ್ಯ ಮತ್ತೆ ಭಕ್ತಿಯೋಗನ ಪಾಲಿಸಿಕಂಡ್ ನಾಲ್ಕ್ ತರದ ವಿದ್ಯೆನ ಕಲ್ತ್ ಮುಂದಕ್ಕೆ ಗೃಹಸ್ಥ ಜೀವನಕೆ ಕಾಲಿಡುತಿದ್ದೊ. ಕಲ್ತ ವಿದ್ಯೆನ ಉಪಯೋಗಿಸಿಕಂಡ್ ಕರ್ಮಯೋಗಿಗ ಆಗಿ ಧರ್ಮನ

ಪಾಲಿಸಿಕಂಡ್ ದುಡ್ ಸಂಪಾದನೆ ಮಾಡಿಕಂಡ್, ತನ್ನ ಕುಟುಂಬದ ಮತ್ತೆ ಸಮಾಜದ ಅವಶ್ಯಕತೆಗಳ್‌ನ ಪೂರೈಸಿ ಕಣ್ತಾ ಗೃಹಸ್ಥಜೀವನ ನಡ್ಸ್‌ತಾ ಇದ್ದೊ. ಸಂಸಾರದ ಜವಾಬ್ದಾರಿ ತೀರ್ದಂಗೆ ವಾನಪ್ರಸ್ಥ ಜೀವನ ಸುರು ಮಾಡ್ತಾ ಇದ್ದೊ. ವಾನಪ್ರಸ್ಥಲಿ ರಾಜಯೋಗನ ಪಾಲಿಸಿಕಂಡ್ ಅಷ್ಟಾಂಗ ಯೋಗನ ಸಿದ್ದಿಸಿಕಂಡ್ ಆರನೇ ಇಂದ್ರಿಯದ ಜ್ಞಾನನ ಪಡ್ಕಣ್ತಾ ಇದ್ದೊ! ಅಲ್ಲಿಂದ ಮುಂದೆ ಅವ್ ಸನ್ಯಾಸಯೋಗ ಪಾಲಿಸಿಕಂಡ್, ತಿಳ್ದ ಜ್ಞಾನನ ಸಮಾಜಕ್ಕೆ ಹೇಳಿಕೊಟ್ಟು ಒಂದ್ ಆರೋಗ್ಯಕರ ಸಮಾಜನ ನಿರ್ಮಾಣ ಮಾಡಿ, ಕಡೆಗೆ ಬದ್ಕ್‌ದ್ ಕಡೇ ಉದ್ಧೇಶ ಮೋಕ್ಷನ ಪಡ್ಕಣ್ತಿದ್ದೊ!

### ಅಷ್ಟಾಂಗ ಯೋಗ

ಬಾಮಿಯೊಳಗೆ ಶುದ್ದ ನೀರ್ ಇರ್ಕನ ಅದರ ತಳ ಲಾಯ್ಕಾಗಿ ಕಂಡದೆ. ಅದರೊಳಗೆ ಒಂದ್ ಕಲ್‌ಚೂರ್ ಹಾಕಿರೆ ಅಲೆಗ ಎದ್ದ್ ತಳ ಕಾಂಬದ್ಲೆ! ಬಾಮಿಲಿ ತಳ ಇರುವಂಗೆ ನಮ್ಮ ಸುತ್ತಮುತ್ತ ದೈವತ್ವ ವುಟ್ಟು. ಬಾಮಿಲಿ ನೀರ್ ಇರುವಂಗೆ ನಮ್ಗೆ ಮನ್ಸ್ ಉಟ್ಟು. ನಮ್ಮಲ್ಲಿ ಇರುವ ನಾನಾ ತರದ ಚಿಂತೆಗ ಕಲ್ಲ್‌ಚೂರ್‌ಗ ಇದ್ದಂಗೆ! ಬಾಮಿದ್ ತಳನ ನಾವು ನಮ್ಮ ಬರಿ ಕಣ್ಣ್‌ಲಿ ನೋಡ್ವಂಗೆ, ದೈವತ್ವನ ನೋಡಿಕೆ ಮನ್ಸಂಗೆ ಒಳಕಣ್ ಇದ್ದದೆ! ನೀರೊಳಗೆ ಕಲ್ಲ್‌ಚೂರ್ ಹಾಕಿಕನ ಅಲೆಗ ಎದ್‌ಬಾಮಿದ್ ತಳ ಕಾಂಬದ್ಲೆ, ಹಂಗೆ ಮನ್ಸ್‌ಚಿಂತೆ ಮಾಡಿಕನ ಮನ್ಸುಲಿ ಅಲೆಗ ಎದ್, ದೈವತ್ವ ಕಾಂಬದ್ಲೆ! ಅಷ್ಟಾಂಗ ಯೋಗಲಿ ಬರುವ ಯಮ, ನಿಯಮ, ಆಸನ, ಪ್ರಾಣಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ, ಸಮಾಧಿ, ಅಭ್ಯಾಸ ಮಾಡಿರೆ ನಮ್ಮ ಚಿಂತೆಗ ಹೋಗಿ ಮನ್ಸ್ ತಿಳಿಯಾಗಿ ದೈವತದ್ ದರ್ಶನ ಆದೆ!

### ಬಡ್ಸಿ ಕಂಡೊ!

ಕಾಲ ಕಳ್ದಂಗೆ, ಕೈಲಿ ಬಡ್ಗೆ ಹಿಡ್ಕಂಡ್ ಕಡ್ಕೆನ ಕಾಯಕೆ ನಿತ್ತಪಾರಗಾರ, ಅವನ ಕೈಕೆಳ್ಗೆ ಇನ್ನೂ ಹೆಚ್ಚಿನ ಪಾರಗಾರರ್‌ನ ಮಡ್ಕಂಡ್ ಊರಿಗೇ ಪಾಳೇಗಾರ ಆಗಿ ಮೆರ್ದದೆ. ಯಾರ್ ಅವನ ಕೈಗೆ ಬಡಿಗೆ ಕೊಟ್ ಅವನ ಬೆಳಿಸಿದೊ ಅವರ ಕೈಯಿಂದಲೇ ತೆರಿಗೆನ ವಸೂಲು ಮಾಡ್ದೆ! ಅದೇ ಪಾಳೇಗಾರರ್ ಹತ್ರ ಪತ್ರ ಇರುವ ಊರ್‌ಗಳ ಮೇಲೆ ಯುದ್ಧ ಮಾಡಿಗೆದ್

ರಾಜರ್ ಆಗಿ ದರ್ಬಾರ್ ಮಾಡ್ರೊ! ಈಗ ರಾಜರ್ ಹೋಗಿ ಸರ್ಕಾರ ಬಾತ್! ಮೌಲ್ಯಾಧಾರಿತ ಶಿಕ್ಷಣದ ವ್ಯವಸ್ಥೆ ಮಾಯ ಆತ್! ಮೌಲ್ಯಾಧಾರಿತ ಬದ್ಕ್ ಮಾಡಿಕೆ ಅಂದ್ ಬಡಿಗೆ ಕೊಟ್ ಪಾರಗಾರನ ಮಡ್ಕಂಡ ಜನಗ, ಇಂದ್ ಅದೆ ಪಾರಗಾರನ ಪಿಎಯಾಗಿ ಅಧಿಕಾರ, ಹಣ, ಆಸ್ತಿ, ಕೀರ್ತಿ, ಗರ್ವ ಸಂಪಾದನೆ ಮಾಡುದೇ ಬದ್ಕ್‌ದ್ ಉದ್ದೇಶತೇಳುವ ಭ್ರಮೆಗೆ ಬಿದ್ ಬದ್ಕ್ ಮಾಡುವ ಬದ್ಲ್, ಸರ್ಕಸ್ ಮಾಡ್ತಾ ಒಳೊ!

**ಹೊಳೆನ ಬುಟ್ರೊ ಪೊಡಕೆ ಬಿದ್ರೊ!**

ಬೇಸಿಗೆಲಿ ಕಾಪಿತೋಟಕೆ ನೀರ್ ಹಾರ್ಸಿಕೆ ತೋಡ್‌ಗೆ ಅಡ್ಡಕಟ್ಟೆ ಕಟ್ಟುವೆ. ನೀರ್ ಜಾಸ್ತಿ ಬಂದ್ ಕಟ್ಟೆ ಒಡಿಯದಂಗ ಕಟ್ಟೆದ್ ಕೊಡಿ ಬರೀಲಿ ಒಂದ್ ಬಗಲೆ ತೆಗ್ದವೆ. ಆ ಬಗಲೆನ ಕಟ್ಟೆದ್ ಅಡಿಲಿ ಅದೇ ತೋಡ್‌ಗೆ ಸೇರ್‌ವಂಗೆ ಮಾಡಿ, ಆ ನೀರ್ ಬೀಳುವಲ್ಲಿ ಒಂದ್ ಪೊಡನ ಮಡ್ಗಿದ್ದವೆ. ಸಲ್ಪ ಮೀನ್‌ಗತೋಡ್‌ಲೇ ಮುಂದೆ ಹೋಗಿ ಕಟ್ಟೆ ಮೇಲೆಂದ ಹಾರಿ ದೊಡ್ಡ ಹೊಳೆ ಸೇರಿಕಂಡ್ ಸ್ವತಂತ್ರ ಆದವೆ. ಬಾಕಿ ಮೀನ್‌ಗ ಬಗಲೆಗಾಗಿ ಹೋಗಿ ಪೊಡಲಿ ಬಿದ್ ಬಂದಿಯಾಗಿ ಒದ್ದಾಡುವೆ. ಈ ಮೌಲ್ಯಾಧಾರಿತ ಬದ್ಕ್‌ದ್ ದಾರಿಲಿ ಹೋಗ್ತಾ ಇದ್ದ ಅಂದ್‌ದ್ ಜನಗ ತೋಡ್‌ಲಿ ಹೋಗಿ ಹೊಳೆ ಸೇರ್ದ ಮೀನ್‌ಗ ಇದ್ದಂಗೆ! ಸರ್ಕಸ್ ಮಾಡುವ ಇಂದ್‌ನ ಜನಗ, ಬಗಲಲಿ ಹೋಗಿ ಪೊಡಲಿ ಬಿದ್ದ ಮೀನ್‌ಗಇದ್ದಂಗೆ! ಮನ್ಸ ಜನ್ಮದ ಉದ್ದೇಶದ ಕಡೆ ಗೋಷ್ಠಿಯೇ ಇಲ್ಲದ ನಮ್ಮ ಆದುನಿಕ ಬದ್‌ಕಾಟಲಿ, ಗಪ್ಪುಗೆ ಇದೆಲ್ಲಾ ಅರ್ಥ ಆಗದೇ ಇದ್ದರೂ, ಗಪ್ಪುದ್ ಚಿಂತೆಗೆ ಅರ್ಥ ಉಟ್ಟು ತಾನೆ?

"ಬದ್ಕಿಕೆ ಸಂಪಾದನೆ ರಕ್ಷಣೆ ಹೊರ್ತ್
ಬದ್ಕೇ ಸಂಪಾದನೆ ರಕ್ಷಣೆ ಅಲ್ಲ"

**ಹೊಳೆಕೆರೆ ಚಿಂಗಪ್ಪ**
ನಂ. 30, 3ನೇ ಹೆಚ್ ಕ್ರಾಸ್
ರುಕ್ಮಿಣಿನಗರ, ನಾಗಸಂದ್ರ, ಬೆಂಗಳೂರು
ಮೊಬೈಲ್ ಸಂಖ್ಯೆ : 994571209



# ದೃಷ್ಟಿ

●

ಜಾನಕಿ ಬೈತಡ್ಕ

ಒಮ್ಮೆ ಪಾರ್ವತಿ ಪರಮೇಶ್ವರರ ಪಾತಾಳಿಕಂಡ್ ಬಂದ ಕಲ್ಲ್‌ನ ಮ್ಯಾಲೆ ಕುದ್ದ್‌ಕಂಡಿದ್ದೊ–ಆಗ ಈಶ್ವರಂಗೆ ನಾನೂ ಯಾಕೆ ಅಲಂಕಾರ ಮಾಡಿಕಾಗದ್ ಯಾಗೊಳು ಬೂದಿ ಬಡ್ಕಂಡ್ ಕುದ್ದ್ ಸಾಕಾತ್‌ತೇಳಿ ಹುಲಿ ಚರ್ಮನ ಹೊದ್ದ್ ಕೊರ್‌ಳ್‌ಲಿ ರುದ್ರಾಕ್ಷಿಮಾಲೆ ಹಾಕಂಡ್ ಕೈಲಿ ತ್ರಿಶೂಲ ಹಿಡ್ದ್ ಕುಸಿಲಿ ಕನ್ನಡಿಲಿ ತನ್ನ ಮೊಕ ನೋಡ್ತ್. ಆಗ ಅವಂಗಾತ್! ನಾನೆಷ್ಟ್ ಪೊರ್ಲುನಂವ! ನನ್ನಂತಂವ ಇಡೀ ಜಗತ್ತ್‌ಲಿ ಯಾರೂಯಿಲ್ಲೆ. ನಾನೆ ಈಗ ಜಗದೊಡೆಯ ನನ್‌ಗಿಂತ ಇನ್ನೊಬ್ಬ ಈ ಮೂರು ಲೋಕಲೂ ಇರಿಕೆ ಸಾಧ್ಯನೆಯಿಲ್ಲೆಂತ ಜಂಬ ಮತ್ತೆ ದರ್ಪಂದ ಹೇಳಿ ಬೀಗ್ತಾಯಿತ್ತ್. ಆಗ ಅಂವನ ದೃಷ್ಟಿ ಅವಂಗೆ ತಾಂಗಿ ತಟ್ಟುತ್ತ ಕುದ್ದಲ್ಲೆ ಪಾರ್‌ಕಲ್ಲ್‌ನ ಮ್ಯಾಲೆ ಸೊಯಿ ತಪ್ಪಿ ಬಿದ್ದೋತು.

ಅಂವಂಗೆ ಸೊಯಿ ತಪ್ಪಿದ್ ನೋಡ್ದ ಹೆಣ್ಣ್ ಪಾರ್ವತಿ ಇವೇನ್ ಈಶ್ವರ ಹಿಂಗೆ ಬಿದ್ದೋತು! ಅಷ್ಟ್ ಬ್ಯಾಗ ಬೀಳೊಕುತಾದರೆ ಇವಂಗೇನಾತ್ ತೇಳಿ ಮರ್ಡಿಕೆ (ಅಳು) ಸುರು ಮಾಡ್ದೆ.

ಅಮ್ಮಾ ನೀನ್ಯಾಕೆ ಹಿಂಗೆ ಅಳ್‌ತಾವಳತ ಗಣಪತಿ ಕೇಳ್ದ?

ಪಾರ್ವತಿ : ನೋಡಿ ಮಕ್ಕಳ! ಗಣಪತಿ, ಕುಮಾರ, ನಿಮ್ಮಪ್ಪ ಬಿದ್ದ್ ಮಲ್‌ಗಿದ್ ಕಾಂಬೊದಿಲ್ಯಾ ಬೀಳ್‌ಕನ ಭೂ ಲೋಕನೆ ನಡ್‌ಗಿತ್. ಅದ್‌ರೂ ಕೇಳ್ತ್‌ಲ್ರ ನಿಮಿಗೆ. ಈಶ್ವರಂಗೆ ಹಿಂಗಾದ್ ನೋಡಿ ಈ ಲೋಕನ ಉದ್ಧಾರ ಮಾಡೊವು ಯಾರ್‌ತ ನಾನ್ ಗೋಳಾಡ್ತವಳೆತ ಹೇಳ್ತ್.

ಗಣಪತಿ : ಅಯ್ಯೋಅಮ್ಮ ಅಂವ ನಾಟಕ ಮಾಡ್ತಾವುಟ್ಟು. ಅಪ್ಪನ ಜುಟ್ಟ್‌ಲಿ ಗಂಗೆನ ಅಡ್‌ಂಗಿಸಿ ಕಂಡ್ ನಾಟಕ ಮಾಡ್ದು ನಿಂಗೆ ಅಷ್ಟೂ ಗೊತ್ತಾದುಲೆನಾ?

ಸುಬ್ರಮಣಿನ ಕರೆಕಾಕನ ರಾಸಿ ಮಡ್ಗಿಕೆ ಕೌಡಿನ ಒಟ್ಟಿಗೆ ತಾತ್. ಅಂವ ಕೌಡಿ ಹಾಕಿ ಪ್ರಶ್ನೆ ನೋಡಿಕೆ ಸುರುಮಾಡ್ತ್. ಆಗ ರಾಸಿಲಿ ಹಿಂಗೆ ಕಂಡ್ ಬಾತ್.

ಪ್ರಶ್ನೆ 1 : ಅಪ್ಪಂಗೆ ತನ್ನದೇ ದೃಷ್ಟಿ ತಾಂಗಿಟ್ಟು. ತನ್ನ ದೃಷ್ಟಿ ತನ್‌ಗೆ ಬಾರಿ ಕೆಟ್ಟದ್.

ಪ್ರಶ್ನೆ 2 : ಅಪ್ಪ ಬೈತೂರ್‌ಗೆ ಹೋಗಿರ್‌ಕಾಕನ ಅಲ್ಲಿ ಒಂದು ಹಂದಿನ ಕೊಂದದ್ ಕಂಡ್ ಬಂದದೆ.

ಪ್ರಶ್ನೆ 3 : ಇನ್ನ್ ಮೂರ್ನೆದ್ ಗಂಗೆನ ತಲೆಲಿ ಮಡ್‌ಕಂಡ್ ಗೌರಿಗೆ ತಿಳ್ದಿಕೆ ಸಂಕಟ ಪಡ್ತಾವುಟ್ಟು ತೇಳಿ ರಾಸಿ ನೋಡ್‌ದರ್‌ನ ನಿಲ್ಸಿತ್.

ತನ್ನ ದೃಷ್ಟಿ ತನ್‌ಗೆ ತಾಂಗಿದರ್‌ಂದ ಅದ್ ಬಾರಿ ಕಠಿಣ ಕಂಡ್ ಬಂದದೆ. ಅದ್‌ಕಾಗಿ ಕೆಲು ಸಾಮಾನ್‌ಗಳ್‌ನ ತರ್‍ಲೊಕುತೇಳಿ ಬಡಗು ದಿಕ್ಕ್‌ನ ಬಲಭಾಗಲಿ ಬೆತ್ತ ಕೋಲು ತೆಗ್ದ್ ಮೂರ್ ಸಲ ಬಡ್ತ್. ಆಶ್ಚರ್ಯ! ಹುತ್ತಕ್ಕೆ ಹೊಡೆಕನ ಅದರೊಳಗೆ ಮಣಿಮಲೆಯರ್‌ತೇಳುವ ಗಂಡ್ ಹೆಣ್ಣ್ ಮಲೆಯರ್‌ನ ಕಂಡ್‌ದೆ. ಅವು ಸ್ವಾಮಿ ನಮ್ಮಿಂದ ನಿಮಿಗೇನಾಕು?

ಸುಬ್ರಮಣಿ : ಈಗ ನೀವು ಹೋಗಿ ದೃಷ್ಟಿ ತೆಗೆಯಕಿರುವ ಸಾಮಾನ್ ಗಳ್‌ನ ತರೊಕುತೇಳ್ತ್. ನಮ್ಮಪ್ಪಂಗೆ ತನ್ನದೇ ದೃಷ್ಟಿ ತಾಂಗಿ ಬಿದ್ದ್ ಹೋಗುಟ್ಟು. ಸೊಯಿಯಿಲ್ಲೆ ಮಲ್‌ಗಿದಲ್ಲಿಂದ ಏಳ್ತುಲೆ. ಗರುಡಂಗೆ ಹೇಳ್ದ. ಕೊಕ್ಕ್‌ಲಿ ತುಂಡ್ ಮಾಡಿ ನೆಕ್ಕಿಸೊಪ್ಪು, ರಂಜೊಳ ಸೊಪ್ಪು, ನಿರ್‌ನಾಣಿ

ಸೊಪ್ಪು ಮೂರು ಸೇರ್ನ್ಲಿ ನೀನ್ ತರೊಕು ತೇಳ್ಚ್.

ಆಗ ಗಣ್‌ಪತಿ ಅವನ ವಾಹನ ಎಲಿ(ಇಲಿ)ಗೂ ಹೇಳ್ಚ್. ಎಲಿ ಏನ್ ಮಾಡ್ತ್? ಅದ್ ಅಲ್ಲೆಲ್ಲಾ ಓಡಾಡಿ ನೀರುಳ್ಳ ತೊಪ್ಪ್ ಬೆಳ್ಳುಳ್ಳ ತೊಪ್ಪ್ ಒಣಗಿಲ್ ಮೆಣ್ಣ್ ಮತ್ತ್ ಭತ್ತದ ಉಮಿನ ಬ್ಯಾಗ ಬ್ಯಾಗ ತಂದ್ ಕೊಟ್ಟದೆ.

ಇನ್ನ್ ಒಂದು ತೆಂಗ್‌ನ ಚಿಪ್ಪಲಿ ಕೆಂಡ-ಮುಕ್ಕಾಲ್, ದೀಪ, ಊದುಬತ್ತಿ, ಒಂದು ಸೇರ್ ಭತ್ತ, ಒಂದು ಮಾನ ಅಕ್ಕಿ ಮಡ್ಗಿ ಎಲಿ ತಂದ ವಸ್ತ್‌ಗಳೊಟ್ಟಿಗೆ ಸಾಸುವೆ ಕಲ್ಲುಪ್ಪು ಸೇರ್ಸಿ ಆ ಮಲೆಯ ಗಂಡ್ ಹೆಣ್ಣ್ ಈಶ್ವರನ ತಲೆಸುತ್ತ್ ತಂದ್ ಸೊಪ್ಪುನ ಮೂರು ಸಲಸುತ್ತ್ ತಂದ್ ಕೆಂಡದ ಮ್ಯಾಲೆ ಹಾಕುವೆ. ಆಶ್ಚರ್ಯ! ಈಶ್ವರ ತಕ್ಷಣ ಎದ್ದ್‌ನಿತ್ತದೆ. ನಂಗ್ಯಾರ್ ದೃಷ್ಟಿನ ತೆಗ್ದವ್ರುತೇಳಿ ತಿಳ್ಕಂಡ್ ಅಮಲೆಯರಿಗೆ ಹೇಳ್ಚ್.

ಈಶ್ವರ : "ನೀವು ಹೇಳ್‌ದೆಲ್ಲಾ ಮಂತ್ರ ಆಗಲಿ. ನೀವು ಮುಟ್ಟದ್ದೆಲ್ಲಾ ಮದ್ದಾಗಲಿ" ತೇಳಿ ಆಶೀರ್ವಾದ ಮಾಡ್ಚ್. ಇಂದೂ ಹಳ್ಳಿಗಳ್ಲಿ ಮಲೆಯರ ಹತ್ರ ಸೊಪ್ಪು ಹಾಕ್ಸುದು, ನೂಲು ಕಟ್ಟುದು ಏನಾದ್ರ ಕಿರಿಯ ಮಾಡ್ಸುದು ಸತ್ತರೆ ಕಾಲೆ ನೋಡ್ಸುದು ಎಲ್ಲಾ ಮಲೆಯರೆ. ಅಲ್ಲದೆ ಅವ್ರು ಊರುದೇವ್ರ ಹಬ್ಬಲಿ ತೆರೆಗಳ್‌ನ ಕಟ್ಟುವೆ. ಆಗ ಅವ್ರು ಮೊಕಕ್ಕೆ ಬಣ್ಣ ಬರ್‌ದವೆ. ಕನ್ನಡಿನ ಆಗಾಗ ನೋಡ್ಕಂಡವೆ. ಇದೇ ಈಶ್ವರನ ಆಶೀರ್ವಾದ ಅವ್ರುಕೆತೇಳಕ್.

ಅವ್ರು ಮಂತ್ರ ಹೇಳಿಕಂಡ್ ಕೈಕಾಲ್ ಬಾರದಿದ್ದರೆ ಒಡಿಗೆ ಕಡಿಯೊದುಸ ಮಾಡ್ತಾ ಇದ್ದವ್ರು. ಇಂದ್ ಬಯುಮಟ್ಟಿಗೆ ಇದೆಲ್ಲಾ ನಶ್‌ಸಿ ಹೋಗ್ತಾಯಿದ್ದು ಕಂಡ್‌ಬಂದದೆ.

ಹಬ್ಬಲಿ ಕನ್ನಡಿಲಿ ಮೊಕನೋಡ್ದು - ಮುಕ್ಕಾಲ್‌ಲಿ ಕುದ್ದ್ ತೆರೆಪದ ಹೇಳುವ ಪದ್ಧತಿ ಇಂದೂವುಟ್ಟು. ಈ ಕಥೆನ ಕೇಳ್ದ ಮ್ಯಾಲೆ ಇದೆಲ್ಲಾ ಈಶ್ವರನ ಆಶೀರ್ವಾದವೆ ತೇಳಿ ನಾವೂಸ ನಂಬಿಕಾದೆ.

ಅಗೆ ಯಾಕ್ಲೆಲಿ ಪಟ್ಟುತೇಳುವ ಮಲ್‌ತಿ ಹೇಳ್ದಕತೆನ ನಾನ್ ಬರ್ದ್ ಮಡ್‌ಗಿದ್ದ್ ನೀವ್ರುಗೆ ಈಗ ಓದಿಕೆ ಕೊಡ್ತಾವಳೆ.

**ಜಾನಕಿ ಬೈತಡ್ಕ**
ಮಡಿಕೇರಿ
ಮೊಬೈಲ್ : 9008571899



# ಹೊತಾರೆ ಊಳಿಟ್ಟ ಟಾಮಿನಾಯಿ

●

ಚಂದನ್ ನಂದರಬೆಟ್ಟು

ಹೊತಾರೆ ಎದ್ದ್ ಗದ್ದೆಪುಣೆ ಸರಿ ಮಾಡಿನತೇಳಿ ಹೋದ ಮಂಜ ಇನ್ನೂ ಬಾತ್ಲತೇಳಿ ಜಾಮು. ಹಾಸಿಗೆನ ಬರಿಲಿ ಇಸಿದ್ದ ಕತ್ತಿ ಹಿಡ್ಕಂಡ್ಹೊರ್ಟತ್. ಕೊಟ್ಟಿಗೆಗೆ ಹೋಗಿ ಕತ್ತಿನ ಸ್ವಲ್ಪ ಉಜ್ಜಿ ಹರ್ತ ಮಾಡ್ಕಂಡ್ಹೊರಕೆ ಕಣ್ಣಾಯ್ಲಿದೆ.

ಆ ತಂಪುನ ಹೊತ್ತ್ಲಿ ಎಲ್ಲಿ ಯಾರ್ನ ಕಾಂಬಕೆ ಸಿಕ್ಕಿದೆ? ಮಂಜುಕ್ಕಿ ಬೆಳ್ಳನೆ ಕಾಣ್ತುಟ್ಟು. ಇನ್ ಕಾದರೆ ಪ್ರಯೋಜನ ಇಲ್ಲೇತೇಳಿ ಗಂಬೂಟ್ಹಾಕಿ ಹೊರ್ಟತ್. ಕೊಟ್ಟಿಗೆಲಿ ಇದ್ದ ಕೆಂಪನ ಕಕೊರ್ಂಡೋಗುಟ್ಟುತೇಳ್ರೆ ಇವನೂ ಹೋಗಿರೋಕು. ಮಂಜನ ಹೆಸ್‌ರ್‌ನ ಜೋರುಲಿ ಕಕರ್ಂಡ್, ಕಾಫಿಗಿಡಲಿ ಹೊಸದಾಗಿ ಬಂದ ಬ್ಯಾಡದ ಜಿಗ್ರ್ನ ಕೀಳ್ತಾಕೆರೆ ಹತ್ರಬಂದದೆ ಜಾಮು.

PRASANNA AIYARNAD

ಎಲ್ಲಿ ನೋಡ್ರೂ ಹೈದ ಕಾಂಬಲೆ, ವಯ್ಸ್ನಿ ಹೈದ ಅಲ. ಎಲ್ಲಾರು ಹೋಗಿರೊಕು, ಇಲ್ಲಾರೆ ಕುದ್ದಿರೊಕು ತೇಳಿ ಇವನ ಕರ್ಮಂದ ನಂಗೆ ನೆಮ್ಮದಿ ಇಲ್ಲೇತೇಳಿ ಪೈಕಂಡ್ ಮನೆಗೆ ತಿರ್ಗಿ ಬಾತ್ ಚಾಮು.

ಹೆಣ್ಣ್ ಮಾಡ್ವ ಪೊಕ್ಕಳರೊಟ್ಟಿಗೆ ನಿನ್ನೆ ಸಾಂಯ್ಯಾಲದ ಕೋಳಿಗೈಪು ಹಾಕಿ ಕಂಡ್ಕೊರ್ಟ್ಟಿ ತಿಂದ್‌ಗಡಾರಾಂತ ತೇಗಿದೆ. ಗಂಟೆ ಒಂಬತ್ತಾದರೂ ಕಾಲೇಜ್ ಹೈದನ ಪತ್ತೆ ಇಲ್ಲೆ. ಕಾಲೇಜ್ ಹೈದ ಮೊಬೈಲ್‌ದ್ದ ಇರ್ದು ಮಾಮೂಲಿ ಅಲತೇಳಿ ಕುದ್ದವ್ಳ ಈಗ ಮನ್ಸಿ ಅವಲಕ್ಕಿ ಕುಟ್ಟಕೆ ಶುರು ಆತ್. ನೆರೆಹೊರೆನ ಮನೆಗೆ ಹೋಗಿರ್ದುತಾ ಹೆಣ್ಣ್ ಸಾವಿತ್ರಿ ಹೇಳಿಕನ, ಅದೂ ಆಗಿರ್ದು ಈ ಮಕ್ಕಳಿಗೆ ಹೇಳಿ ಹೋಕೆ ಏನ್ರೋಗ ತೇಳಿಕಂಡ್ ಅಂಗಳಲೇ ಸುಮ್ಮನೆ ನಿತ್ತ್ ಗದ್ದೆ ಕಡೆ ಕಣ್ಣಾಯ್ಸಿದೆ. ಈಗ ಮಂಜಕ್ಕುಟ್ಟಿ ಆಗಿ ಲಾಯ್ಕ ಕಾಣ್ತಿತ್ತ್. ಗದ್ದೆಲಿ ಕೆಂಪ ಮಾತ್ರ ಹುಲ್ಮೇಯ್ಸುಂಟ್ಟು, ಕಾಗೆಗ ಕೆಂಪನ ಬೆನ್ನಮ್ಯಾಲೆ ಕುದ್ದ್‌ಕಂಡ್ ಉಣ್ಣೆಗಳ್ನ ಹೆಕ್ಕಿ ತಿಂತಿದ್ವೊ. ಅವ ಆಗಾಗ ತಲೆನ ಜೋಡ್ಸಿಕಂಡ್ಕಣ್ಣು ಬದಿಲಿ ಹಂಗೆ ಬೆನ್ನ ಮೇಲೆ ಕುದ್ದ ನುಸಿಗಳ ಬಾಲನ ಅಡ್ಸಿ ಓಡ್ಸಾವ್ವ ಅವನ ಪಾಡಿಗೆ ಇತ್ತ್. ಇನ್ನ್ ಕಾದರೆ ನನ್ನ ಕೆಲ್ಸ ಆಲೆ ತೇಳಿ ಪ್ಯಾಂಟ್ಶರ್ಟ್ ಹಾಕಿಪೇಟೆಗೆ ಹೊಟ್ಟೋದೆ ಚಾಮು. ಜೊತೇಲಿ ಬಂದ ಟಾಮಿಗೆ ಅರ್ಧದಾರಿಲಿ ನೀನ್ಯಾಕೆ ಬತ್ತೊಳ ಮಾರಾಯ ನಾನ್ಪೇಟೆಂದ ಎಂತಾರು ತಕಂಬನ್ನೆ ನೀನ್ ಮನೆಗೆ ಹೋಗ್ ಸಾವಿತ್ರಿ ಮಾತ್ರ ಉಟ್ಟು ಅವ ಎಲ್ಲೋ ಸತ್ತುಟ್ಟು ತೇಳಿ ದಾರಿಲಿ ಬಂದ ರಿಕ್ಷಾ ಹತ್ತಿ ಮುಂದೆ ಹೋದೆ. ಯಜಮಾನ ಹೋದ ಮೇಲೆ ನಂಗೇನ್ ಕೆಲ್ಸ ರೋಡ್ಲೀತ ಟಾಮಿರೋಡಿಡೀ ಸರ್ವೆ ಮಾಡಿ ಕಂಡ್ಮೆಲ್ಲಗೆ ಓಡಿ ಕಂಡ್ಮನೆಗೆ ಬಂದ್ಮೂಲೆನ ಗೋಣಿ ಹಾಕಿಟ್ಟ ಕುಕ್ಕೆ ಒಳಗೆ ಮಲ್ಗಿದೆ.

ಅಡಿಗೆ ಮುಗ್ಸಿದ ಸಾವಿತ್ರಿ ರಾಶಿ ಇದ್ದ ಬಟ್ಟೆನ ಒಂದ್ವಂಚೆಲಿ ಕಟ್ಟಿ ಬಟ್ಟೆ ಒಗಿವ ಕಲ್ಲ್ನ ಹತ್ರತ ತಂಡ್ಹೋಗಿ ಹಾಕಿ ಅಯ್ಯಪ್ಪಾ... ತೇಳಿ ಸೊಂಟಕೆ ಒಮ್ಮೆ ಕೈಹಿಡ್ಡದ್ದೆ ಕಡೆ ನೋಡಿ ಮಜನ ಜೋರು ಕರ್ದದೆ. ಆ ಕಡೆಂದ ಉತ್ತರ ಬಾತ್ಲೆತ ಗೊತ್ತಾದಂಗೆ ಅವ್ಳ ಕೆಲ್ಸ ಶುರು ಮಾಡಿದೆ. ಬಟ್ಟೆನ ನೀರ್ಲಿ ಜಾಲ್ಸಿ ಉಜ್ಜಿ ತೊಳ್ದ್ಹೊರಗೆ ತಂತಿಲಿ ಹಾಕಿಕೆ ಶುರುಮಾಡ್ತ್. ಮಧ್ಯಾನ ಪೇಟೆಗೆ ಹೋದ ಚಾಮು ವಾಪಾಸ್ಬಾತ್. ಬಾಕನನೇ ಸ್ವಲ್ಪ ಕುಡ್ಕಂಡ್ಬಂದಿದ್ದ ಚಾಮು ಮನೆಗೆ ಬಂದಂಗೆ ಮಂಜ ಎಲ್ಲೀತೇಳಿ ಹೆಣ್ಣ ಕೇಳಿ ಅವ ಇನ್ನೂ ಬಾತ್ಲೇತೇಳಿ ಗೊತ್ತಾಕನ ಸಿಟ್ಟಿ ಆ ಪರ್ದೇಸಿ ಅಲ್ಲೇ

ಗದ್ದೆಲಿ ಮರ ಕಟ್ಟಿ ಸತ್ತೋತ್ಕಂಡದೆ ತೇಳಿ ಕುದ್ದ ಮಸ್ತಿಗೆ ಆ ಕಡೆ ಈ ಕಡೆ ಕಾಲ್ಹಾಕಿ ಹೋಗಿ ರೂಮ್ನ ಬೆಡ್ಲಿ ಅಡ್ಡಬಿದ್ದವಂಗೆ ಮತ್ತೆ ಬೋದನೇ ಇಲ್ಲೆ. ಜೋರು ಗೂರ್ಕೆ ಮಾತ್ರ ಕೇಳ್ತೆ. ಸಾಂಯ್ಕಾಲ ಆದರೂ ಹೈದ ಕಾಂಬಕೆ ಸಿಕ್ಕದಾಕನ ಸಾವಿತ್ರಿಗೆ ಗಾಬರಿ ಸುರು ಆತ್. ಗಂಡ್ಯ್ವುದ ಎಲ್ಲಿಯಾದ್ರು ಹೋಗಿರ್ದ್ನತ ಇಷ್ಟೊತ್ತು ಕಾದ ಹೆತ್ತ ಕರ್ಳ್ಕಟ್ಕಂಡ್ಕಣ್ಣುಜ್ಜಿಗೆ ಸುರು ಮಾಡ್ತ್. ಯಾಜರ್ನತೆ ಹೇಳ್ಕೊಣ್ಣು ಕಷ್ಟನ. ಸಾಂಯ್ಕಾಲ ಅಗರ್ನಟೆ ಕಳ್ಳಟ್ಟು ಕಜ್ಜಡದ ಕತ್ತಿತ ಕಂಡ್ಮಜನ ಜೋರ್ನಕರ್ನಗದ್ದೆ, ಕಾಫಿತೋಟ ಎಲ್ಲಾ ಹುಡ್ಕಿಕಂಡ್ ಪಲಕ್ಕಿ ತೋಟತಲ್ಬಿದೆ. ಬರೆ ಹತ್ತಿ ಮೇಲೆ ಹೋಗ್ತಿದ್ದ ಸಾವಿತ್ರಿ ಯಾರೋ ದಾರಿ ಮಾಡಿ ಕಂಡ್ಹೋದ ಗುತ್ಕರ್ನತ ಅದೇ ದಾರಿಲಿ ಮೇಲೆ ಹತ್ತಿದೆ. ನೋಡಿರ್ರೆ ಮಜ ದೊಡ್ಡಮಾವ್ನ ಮರದ ಅಡಿಲಿ ಒಗ್ನಕುದ್ದಂಗೆ ಮಲ್ಗಿಟ್ಟು. ಕರ್ದರೆ ಆ ಇಲ್ಲೆ ಓ ಇಲ್ಲೆ.

ಅಲ್ಲೇ ಕಾಲ್ನ ಬರಿಲಿ ಸಿಗ್ರೇಟ್ನ ಪ್ಯಾಕೆಟ್. ಚಿಕ್ಕ ಪ್ಲಾಸ್ಟಿಕ್ಲಿ ಎಂತೋ ಸೊಪ್ಪು. ಲೈಟ್ ಎಲ್ಲ ಉಟ್ಟು. ಸಿಗ್ರೇಟ್ಲೋದಿಟ್ಟು ತೇಳಿಕೆ ಸಾಕ್ಷಿಯಾಗಿ ಒಂದೆರಡ್ ತುಂಡು ಸಿಗ್ರೇಟ್ನ ಕೆಡ್ಡಿ ಇಸಿಟ್ಟು. ಮೈಮುಟ್ಟಿ ಕರ್ದರೂ ಮಾತಿಲ್ಲೆ ಕತೆಯಿಲ್ಲೆ.

ಜಾಮು ಬೆಳ್ಗೆ ಹೇಳ್ದ ಮಾತ್ಸ್ನಿ ಒಮ್ಮೆ ತಲೆ ಕೆಟ್ಹ್ಯೋದೆ ಸಾವಿತ್ರಿಗೆ. ಅವ ಎಲ್ಲಾರು ಮರಕಟ್ಟಿ ಹೋಗಿರ್ದ್ನತೇಳಿತ್ತ್ ಜಾಮು. ಸಾವಿತ್ರಿ ಒಟ್ಟಿಗೆ ಬಂದ ಟಾಮಿ ಚಿಕ್ಕಜಮಾನನ ಮೂಸಿ ಮೂಸಿ ನೋಡಿ ಕುಂಯಿ ಕುಂಯಿತ ಮಟ್ಕಂಡ್ ಅವನ ಸುತ್ತ ಸುತ್ತಿಕಂಡಿತ್ತ್. ಒಮ್ಮೆಲೆ ಎದ್ದ ಸಾವಿತ್ರಿ. ಎದ್ದ್ವುದ್ದ್ವಾರಿ ಕಂಡ್ಕೆಳಗೆ ಇದ್ದ ಕೊಲ್ಲಿ ಕಡೆ ಹೋದೆ. ನೀರ್ತ್ನಕ ಬಾಕೆ ಎಂತ ಇಲ್ಲೇ ತಗೊತ್ತಾಕನ ಹಾಕಿದ್ದ ಸ್ವೆಟರ್ನಜ್ಜಿ ನೀರ್ಲಿ ಮುಕ್ಗಿಸಿ ಜಾಸ್ತಿ ನೀರ್ಹೋರ್ನರದಂಗೆ ಹಿಡ್ಕಂಡತ್ತ್ರೆ ಮೇಲೆ ಮರದ ಹತ್ರ ಓಡಿಬಂದದೆ.

ತೋಟದ ಮುಳ್ಳ್ಹಾಗಿ ಕೈಕಾಲ್ಗಾಯ ಆದರೂ ತಲೆ ಕೆಡ್ಸಿಕಣದೆ ಮಜನ ಮುಖಕ್ಕೆ ನೀರ್ಹಾರ್ನಕಿ ಕೈನಚಂಡಿ ಬಟ್ಟೆಲಿ ಒರ್ಸಿನಕನ ಮೆಲ್ಲಗೆ ಎಚ್ಚರ ಆತ್ತ್ಯುದ. ಮಜ ಎಚ್ಚರ ಆದ್ಹೋಡಿ ಕುಶಿಯಾದ ಸಾವಿತ್ರಿ. ಎಂತರ ಇದೆಲ್ಲ. ಎಂತ ಆತ್ಸಿಂಗೆ. ಯಾಕೆ ಇಂತ ಬುದ್ದಿ ಬಾತ್ತ ಒಂದೇ ಸಮ ಕೇಳ್ದ ಪ್ರಶ್ನೆಗೆ ಉತ್ತರ ಹೇಳಿಕೆ ಅವಂಗೆ ಬೋದ ಇದ್ದರೆ ತಾನೆ. ಮತ್ತೆ ಮತ್ತೆ ತಟ್ಟಿ ಕೇಳಿಕನ ಪಿರಿದ್ದ ಗಾಂಜಾ ಸೊಪ್ಪ್ನ ಅಮಲ್ನಲ್ಲಿ ಇದ್ದಿದ್ದ ಕಿರಣಂಗೆ ಎದ್ದ್ನ ಅಮ್ಮನ ಕಂಡ್ತ್ಯೆ ಎಲ್ಲ ಬೆಪ್ರಿಕೆ ಸುರು ಆತ್. ಹೆದ್ರಿ ಎದ್ರಿಕೆ ನೋಡಿದೆ ಕಿರಣ. ಓಡ್ಲು ಎಲ್ಲಿಂದ ಎದ್ದ್ನಲ್ಲಿಕೇ ಆಗ್ತಿಲ್ಲೆ. ಆದರೂ ಅಲ್ಲಿಂದ

ಓಡೊಕೊತೇಳಿ ಕಷ್ಟಪಟ್ಟು ಎದ್ದವ ಹಂಗೇ ಹಿಂದೆಗೆ ಹೊಣ್ಕಿಬಿದ್ದದೆ. ಬರೆಲಿ ಉರ್ಳಿಕಂಡ್ಹೋದ ಕಿರಣ ತೋಟದ ಕೆಳಗೆನ ಕಣಿಗೆ ರಭಸಲಿ ಬಿದ್ದದೆ. ಒಟ್ಟಿಗೆ ಓಡ್ದ ಟಾಮಿ ಕಿರಣನ ಮೂಸಿ ಬೊಗ್ಳಿಗೆ ಶುರುಮಾಡ್ತ್.

ಅಯ್ಯಯ್ಯೋ ಮಜತ ಜೋರಾಗಿ ಬೊಬ್ಬೆ ಹೊಡ್ದ ಸಾವಿತ್ರಿ ಮಜಂಗೆ ಎಂತಾತ್ತೇಳಿ ಓಡಿಬಂದವ್ಳು ಆಯತಪ್ಪಿ ಮಜ ಬಿದ್ದ ಕಣಿಗೆ ಬಿದ್ದದೆ. ಬಿದ್ದ ಕಿರಣನ ತಲೆ ಪಾರೆಗೆ ತಾಗಿ ಅವನ ಪ್ರಾಣ ಆಗಲೆ ಪರಾರಿಯಾಗಿತ್ತ್. ಇತ್ತ ಅವನ ಹತ್ರಲೇ ಬಿದ್ದ ಸಾವಿತ್ರಿನ ತಡಿ ಮೊನ್ನೆ ಕಜ್ಜಡ ಸಪ್ರಿಕನ ಕಡ್‌ದ್ ತೆಗ್ದಿದ್ದ ಮುಳ್ಳ್ಕ್ಯಟೆನ ಗುತ್ತಿಗಳ ಮೇಲೆ ಬಿದ್ದ್ ರಕ್ತಲಿ ಮುಳ್ಗಿ ಒಮ್ಮೆ ಮಜನ ನೋಡಿ ಹಂಗೆ ಪ್ರಾಣ ಬಿಟ್ಟದೆ. ಇದೆಲ್ಲಾ ನೋಡ್ತಿದ್ದ ಟಾಮಿ ಸಾವಿತ್ರಿನ ಮೇಲೆ ಕೈಯಿದರ ಭಾಷೆಲಿ ಎಂತೊ ಹೇಳ್ತಿತ್ತ್. ಕೇಳಿಕೆ ಸಾವಿತ್ರಿ ಜೀವಲಿ ಇದ್ದರೆ ತಾನೆ.

ಇತ್ತ ಮನೇಲಿ ಇದ್ದ ಜಾಮು ರೂಮ್‌ಂದಲೇ ನಂಗೆ ಹಸಿವಾಗ್ತುಟ್ಟು ಊಟ ಕೊಡ್ನೆ, ರಾಕ್ಷಸಿತ ಕಿರ್ಚಿದೆ. ಊಟ ಕೊಡಿಕೆ ಯಾರಾದರು ಇದ್ದರೆ ಅಲ ಕೊಡ್ದು. ಪರಕಾಯ ಪ್ರವೇಶ ಆದ ಅವಂಗೆ ಭೂಮಿಲಿ ಎಂತ ಆಗ್ತುಟ್ಟುತೇಳ್ವ ವಿಚಾರನೇ ಗೊತ್ತೆ. ಯಾರು ಊಟ ಕೊಡದೆ ಇರಿಕ್ಕನ ಸಿಟ್ಟಂದ ಜಾಮು ಪಾರ್ಸೆಲ್ ತಂದ ಒಂದು ಬಾಟ್ಲಿ ಕಳ್ಳ್‌ನ ನೀರ್ ಹಾಕದೆ ಹಂಗೇ ಕುಡ್ದದೆ. ಕುಡ್ದವ ನಿಲ್ಲಿಕಾಗದೆ, ಏಯ್ ನಂಗೆಲ್ಲ ಗೊತ್ತುಟ್ಟು. ಯಾರಿಗೂ ನಾನ್ಹೆದ್ರುಲೆ ಕೋಪಿ... ಕೋಪಿ ಉಟ್ಟೂತೇಳ್ತಾ ಅಲ್ಲೇ ಬೆಡ್ಡಿಗೆ ಮಗ್ಚಿದೆ.

ಮಾರನೆ ದಿನ ಬೆಳಗ್ಗೆ ಆಗುಟ್ಟು. ಜೋರು ಚಳಿ ಬೆಡ್ಡಿಲ್ಲಿ ಬಿದ್ದಿದ್ದ ಜಾಮುನ ತಡಿ ತಣ್ಣನೆ ಆಗುಟ್ಟು. ಅಂವನೂ ಹೆಣ್ ಮಂಜನ ಹಿಂದೆ ಭೂಮಿ ಬಿಟ್ ಹೊರ್ಟ್ ಹೋಗುಟ್ಟು. ಇತ್ತ ಗದ್ದೆಲಿ ಇದ್ದ ಕೆಂಪನ ಕಟ್ಟಿದ ಜಾಗಲಿ ಸ್ವಲ್ಪ ರಕ್ತ ಚೆಲ್ಲಿಟ್ಟು. ರಾತ್ರೋರಾತ್ರಿ ಹಟ್ಟಿಲಿ ಕಟ್ಟಿದ ಕೆಂಪನ ಹುಲಿ ಹೊತ್ತುಟ್ಟು. ಟಾಮಿಮನೆ ಅಂಗಳಲಿ ಬಾಯಿನ ಆಕಾಶಕೆ ಮಾಡಿ ಜೋರು ಊಳಿಡ್ತುಟ್ಟು.

ಫರ್ಲಾಂಗ್ದೂರಲಿ ಇದ್ದ ನೆರೆಮನೆಯವು ಈ ನಾಯಿ ಯಾಕೆ ಸತ್ತವರ ಮನೇಲಿ ಕಿರ್ಚಿದಂಗೆ ಬೊಬ್ಬೆ ಹಾಕ್ತುಟ್ಟುತ ಜೈಕಣ್ತಿದ್ದೊ ತೋಟ ಕೆಲ್ಸದ ಪೂವ ಸಾವ್ನ ಸುದ್ದಿ ಹೇಳಿಕೆ ಓಡಿ ಬರ್ವವರೆಗೆ.

---

**ಚಂದನ್ ನಂದರಬೆಟ್ಟು**
ಮೊಬೈಲ್ : 8762632314

# ಬನ್ನಿ ಓದೋಮ

‘ಜೋಗಿ’ ಕಾವ್ಯನಾಮದ ಗಿರೀಶ್ ರಾವ್ ಹತ್ವಾರ್, ನಾಡ್‌ನ ಹೆಸರಾಂತ ಪತ್ರಿಕೆಯ ಸಂಪಾದಕರಾಗಿರೊವ್ರು. ಕತೆ, ಕಾದಂಬರಿ, ಅಂಕಣ, ಹಿಂಗೆ ಬೇರೆ ಬೇರೆ ಪ್ರಕಾರದ ಬರಹಗಳ ಮೂಲಕ ಜನರ ಹತ್ರ ತಲುಪಿದವ್ರು. ಕಾವ್ಯಾತ್ಮಕ ಶೈಲಿಯಲ್ಲಿ,ಸರಳವಾಗಿ ಆಪ್ತವಾಗಿ, ಎದೆ ನಾಟುವಂಗೆ ಬರೆವ ಜೋಗಿಯವರ ಬರಹಗಳ್ನ ಓದುವ ಖುಷಿನೇ ಬೇರೆ. ‘ಹಾಯ್ ಬೆಂಗಳೂರು’ ಪತ್ರಿಕೆಗೆ ಅವ್ರು ಬರೆತ್ತಿದ್ದ ‘ಜಾನಕಿ’ ಕಾಲಂ ತೇಳುವ ಅಂಕಣ ಇಂದ್ ನಿಮ್ಮ ಮುಂದೆ ಓದಿಗೆ ಇಡುತ್ತೋಳೊ. ಬರೆಯುವವ್ರು, ಓದುವವ್ರು ಎಲ್ಲವ್ರೂ ಓದಕಾದ ಬರಹ ಇದ್. ನಾವ್ಯಾಕೆ ಓದೋಕುಂತೇಳುವ ಈ ಪ್ರಶ್ನೆ ನಮ್ಮೆಲ್ಲರೊಳಗೆ ಹುಟ್ಟಿ ಕಂಡರೆ ಈ ಓದು ಸಾರ್ಥಕ.

## ಹಾಗಿದ್ದರೆ ನಾನೇಕೆ ಓದಬೇಕು?

ನಾನೇಕೆ ಓದುತ್ತೇನೆ?

ಈ ಪ್ರಶ್ನೆಗೆ ಇವತ್ತು ಉತ್ತರ ಹುಡುಕುವುದು ಕಷ್ಟ. ಕೇವಲ ಖುಷಿಗೋಸ್ಕರ ಓದುವುದಕ್ಕೆ ಇವತ್ತು ಯಾರಿಗೂ ಪುರುಸೊತ್ತಿಲ್ಲ. ಓದುವುದರಿಂದ ವ್ಯಕ್ತಿತ್ವ ವಿಕಸನಗೊಳ್ಳುತ್ತದೆ ಅನ್ನುವುದನ್ನು ಯಾರೂ ನಂಬುವುದಿಲ್ಲ. ಓದುವುದರಿಂದ ಜೀವನಪ್ರೀತಿ ಹೆಚ್ಚಾಗುತ್ತದೆ ಎನ್ನುವವರು ಸಿಗುವುದಿಲ್ಲ. ಮನರಂಜನೆಗಾಗಿ ಬೇರೆ ಮಾಧ್ಯಮಗಳಿವೆ. ನಮಗೆ ಬೇಕಾದದ್ದು ಮಾಹಿತಿ ಮಾತ್ರ ಅನ್ನುವವರು ಹೆಚ್ಚಾಗುತ್ತಿದ್ದಾರೆ. ಹೀಗಾಗಿ ಒಂದು ಜೀವನಚರಿತ್ರೆಯನ್ನೋ ಒಂದು ಕಾದಂಬರಿಯನ್ನೋ ಇಡಿಯಾಗಿ ಓದಿ ಮುಗಿಸುವ ಅಗತ್ಯ ಯಾರಿಗೂ ಕಂಡುಬರುತ್ತಿಲ್ಲ.

ಹಾಗೆ ಹೇಳಿದರೆ ಇದನ್ನು ಕೇವಲ ವಾದಕ್ಕಾಗಿ ಹೇಳಲಾಗುತ್ತಿದೆ ಎಂದು ವಾದಿಸುವವರಿದ್ದಾರೆ. ಅಂಕಿ-ಅಂಶಗಳನ್ನು ಕೊಟ್ಟು ಇಂತಿಷ್ಟು ಮಂದಿ ಪುಸ್ತಕ ಓದೇ ಓದುತ್ತಾರೆ ಎಂದು ಹೇಳುವವರಿದ್ದಾರೆ. ಆದರೆ ಅಂಕಿ-ಅಂಶಗಳಿಗಿಂತ ಮುಖ್ಯವಾಗಿ ಗಮನಿಸಬೇಕಾದ ಅಂಶ ಇನ್ನೊಂದಿದೆ. ಅದು ಇವತ್ತಿನ ಓದುಗರಿಗೆ ಇಷ್ಟವಾಗುವ ಸಾಹಿತ್ಯ

ಸೃಷ್ಟಿಯಾಗುತ್ತಿದೆಯೇ ಎನ್ನುವ ಪ್ರಶ್ನೆ.

ಕೆ.ಎಸ್. ನರಸಿಂಹಸ್ವಾಮಿ ತೀರಿಕೊಂಡಾಗ ಅವರ ಹಾಡುಗಳ ಮೂಲಕವೇ ಅವರಿಗೆ ಶ್ರದ್ಧಾಂಜಲಿ ಅರ್ಪಿಸುವ ಕಾರ್ಯಕ್ರಮವೊಂದು ನಡೆಯಿತು. ಅಲ್ಲಿಗೆ ಬಂದಿದ್ದವರೆಲ್ಲ ಮಧ್ಯವಯಸ್ಕರು: ಅವರನ್ನು ಕರೆತರಬೇಕಾದ ಅನಿವಾರ್ಯಕ್ಕೆ ಬಂದಿದ್ದ ಬೆರಳೆಣಿಕೆಯ ತರುಣ-ತರುಣಿಯರು. ಕೆ.ಎಸ್.ನ. ಮೂರು ತಲೆಮಾರಿನ ಜವ್ವನಿಗರನ್ನೂ, ದಂಪತಿಗಳನ್ನೂ, ಅಷ್ಟಾಗಿ ಆವರಿಸಿಕೊಂಡವರು. ಅವರು ಇವತ್ತಿನ ಏರುಜವ್ವನೆಯರಿಗೇಕೆ ಇಷ್ಟವಾಗುವುದಿಲ್ಲ?

ನವತರುಣ-ತರುಣಿಯರ ಬಳಿ ಉತ್ತರ ಸಿದ್ಧವಾಗಿದೆ: 'ಕೆಎಸ್‌ನ ನಿಮ್ಮ ಕಾಲಕ್ಕೇ ಸರಿ. ಅವರ ಬರೆದದ್ದನ್ನು ನಾವೂ ಓದಿ ಹತ್ತಿರವಾಗೋದಕ್ಕೆ ಯತ್ನಿಸಿದೆವು. ಆದರೆ ನಮಗ್ಯಾಕೋ ಅದು ರುಚಿಸಲೇ ಇಲ್ಲ. ತುಂಬ ಔಟ್‌ಡೇಟೆಡ್ ಕವಿ ಅವರು. ಅಂಥ ಸೂಕ್ಷ್ಮ ಸಂವೇದನೆಗಳು ಈಗ ಯಾರಲ್ಲೂ ಇಲ್ಲ.'

ಅಂದರೆ ತಾರುಣ್ಯದ ಸಂವೇದನೆಗಳೂ ಬದಲಾಗಿ ಹೋಗಿದ್ದಾವಾ?

'ಹೌದು. ನಮ್ಮೂರ ಬಂಡಿಯಲಿ ನಿಮ್ಮೂರ ಜಿಟ್ಟಾಗ ಓಡಿದುದು ದಾರಿ ಬೇಗ' ಅಂತ ಬರೆದಿದ್ದಾರೆ. ಈಗ ಬಂಡಿ ಎಲ್ಲಿದೆ? ಕಾರಲ್ಲಿ ಝುಮ್ಮಂತ ಹೋಗಿ ಬರುತ್ತೇವೆ? ಬಸ್ಸಲ್ಲಿ ಚೆನ್ನಾಗಿ ನಿದ್ದೆ ಹೊಡೀತಾ ಊರಿಗೆ ಹೋಗುತ್ತೇವೆ.'

ಅದೆಲ್ಲ ಸರಿ. ಕಾರನ್ನೋ ಬಸ್ಸನ್ನೋ ಬಂಡಿ ಅಂದುಕೊಳ್ಳಬಹುದಲ್ಲ?

'ಆದರೆ ಏರುತ ಇಳಿಯುತ ರಾಯರು ಬಂದರು ದೂರದ ಊರಿಂದ. ಕಣ್ಣನು ಕಡಿವರು ನಿದ್ರೆಯು ಬಾರದು ಪಮಳು ಒಳಗಿಲ್ಲ ಅಂದರೆ ಹ್ಯಾಗೆ ಅರ್ಥವಾಗಬೇಕು? ಈಗ ಆಕೆ ಪೀರಿಯಡ್ಸ್‌ನಲ್ಲಿದ್ದರೂ ಜೊತೆಗೇ ಇರುತ್ತಾಳೆ. ನಮ್ಮ ಹತ್ತಿರವೇ ನ್ಯಾಪ್‌ಕಿನ್ ತರಿಸುತ್ತಾಳೆ.'

ಅದೆಲ್ಲ ನಿಮ್ಮಿಬ್ಬರ ನಡುವಿನ ಹೊಂದಾಣಿಕೆಗೆ ಸಂಬಂಧಿಸಿದ್ದು. ಆದರ ನರಸಿಂಹಸ್ವಾಮಿ ಬರೆದಂಥ ಮೃದುವಾಗ ಭಾವನೆಗೆ ಅವಕಾಶವೇ ಇಲ್ಲ ಅಂತೀರಾ? ಯಾವತ್ತೂ ನಿಮಗೆ ಹಾಗೆಲ್ಲ ಅನ್ನಿಸಲೇ ಇಲ್ಲವೇ?

'ಇಲ್ಲ. ಮೊದಲ ದಿನ ಮೌನ... ಅಳುವೇ ತುಟಿಗೆ ಬಂದಂತೆ... ಅನ್ನುವ ಸಾಲು ನನಗೆ ಹೇಗೆ ಹೊಂದಬೇಕು? ನನ್ನ ಹತ್ತಿರ ಮೊಬೈಲಿದೆ. ಗಂಡನ ಮನೆಗೆ ಬಂದ ತಕ್ಷಣ ಫೋನ್ ಮಾಡಿ ಅಮ್ಮನ

ಹತ್ತಿರ ಮಾತಾಡಿದೆ. ಮತ್ತೆರಡು ಸಾರಿ ತಂಗಿ ಫೋನ್ ಮಾಡಿದ್ಳು. ಸುಮ್ನೆ ತರಲೆ ಮಾಡ್ತಾಳೆ ಅಂತ ರಿಸೀವ್ ಮಾಡ್ಲಿಲ್ಲ. ತುಂಬ ಮೆಸೇಜ್ ಕಳಿಸಿದ್ದಾಳೆ.'

'ನಥಿಂ ಈಸ್ ಸೋ ಸೆಂಟಿಮೆಂಟಲ್. ಸುಮ್ನೆ ಹುಡುಗರು ಟೆನ್ಷನ್ ಮಾಡ್ಕೋತಾರೆ. ಹುಡುಗಿಯನ್ನು ತವರಿಗೆ ಕಳಿಸುವಾಗ ಅಳೋದು ಕೇವಲ ಫಾರ್ಮಾಲಿಟಿ ಅಷ್ಟೇ. ಒಬ್ಬಳೇ ಮಗಳೆಂದು ನೀವೇಕೆ ಕೊರಗುವಿರಿ? ಒಬ್ಬಳೇ ಮಡದಿ ಎನಗೆ? ಹಬ್ಬದೂಟದ ನಡುವೆ ಕಣ್ಣೀರ ಸುರಿಸದಿರಿ. ಸುಮ್ಮನಿರಿ ಪಾಪನವರೇ ಎಂಬ ಮಾತು ನಮಗಂತೂ ಹೊಂದೋಲ್ಲ ಬಿಡಿ' ಅನ್ನುತ್ತಾರೆ ನವದಂಪತಿಗಳು.

ಅಲ್ಲಿಗೆ ಸಾಹಿತ್ಯ ತನ್ನ ಮಾಂತ್ರಿಕತೆ ಕಳಕೊಂಡಿದೆಯಾ? ಅಥವಾ ಕಳೆದ ಹತ್ತು ದಶಕಗಳಲ್ಲಿ ನಿಧಾನವಾಗಿ ಆದ ಬದಲಾವಣೆಯನ್ನು ಮೀರಿಸುವಂಥ ಬದಲಾವಣೆ ದಿಢೀರನೆ ಸಂಭವಿಸಿದೆಯಾ? ಅದನ್ನು ಹಿಡಿದಿಡುವ ಸಾಹಿತ್ಯ ನಮ್ಮಲ್ಲಿ ಸೃಷ್ಟಿಯಾಗುತ್ತಿಲ್ಲ ಅನ್ನೋಣವೇ? ಹಾಗಿದ್ದರೆ ಇದೇ ಹುಡುಗ-ಹುಡುಗಿಯರು ಮೆಚ್ಚಿ ಗುನುಗುನಿಸುವ ಇಂಗ್ಲಿಷ್ ಪಾಪ್ ಸಾಂಗುಗಳಲ್ಲಿ ಅಂಥ ಸಾಹಿತ್ಯ ಏನಿದೆ?

ಅದಕ್ಕೋಸ್ಕರವೇ ಒಂದು ಕ್ಯಾಸೆಟ್ ತರಿಸಿ ಕಷ್ಟಪಟ್ಟು ಕೇಳಿದರೆ ಅದರಲ್ಲಿದ್ದದ್ದು ಇಷ್ಟೇ;

You are the love of my life
I knew it right from the start
the moment I looked at you
You found a place in my heart

ಈ ಸರಳ ಸಾಲುಗಳೇ ಇವತ್ತಿನ ಇಂಗ್ಲಿಷ್ ಬಲ್ಲ ತರುಣ-ತರುಣಿಯರ ಪ್ರೇಮಗೀತೆ. ಇದಕ್ಕಿಂತ ಸಾವಿರ ಪಾಲು ಉತ್ತಮವಾದ ಹಾಡನ್ನು ನರಸಿಂಹಸ್ವಾಮಿ, ಬೇಂದ್ರೆ, ಕುವೆಂಪು ಬರೆದಿದ್ದಾರೆ ಅಂದರೆ ಒಪ್ಪುವುದಕ್ಕೆ ಹುಡುಗರು ತಯಾರಿಲ್ಲ. ಅವರೆಲ್ಲ ಬರೆದಿರಬಹುದು. ಆದರೆ ಅದನ್ನು ನಮಗೆ ಬೇಕಾದ ಫಾರ್ಮ್‌ನಲ್ಲಿ ಪ್ರೆಸೆಂಟ್ ಮಾಡುವುದೂ ಮುಖ್ಯ. ಜಾರ್ಜ್ ಬೆನ್ಸನ್‌ನ ಹಾಡು ಕೇಳುತ್ತಿದ್ದರೆ ನನಗದು ಪೂರ್ತಿಯಾಗಿ ಅರ್ಥವಾಗುತ್ತದೆ. ಅದು ನನ್ನ ಭಾಷೆಯಲ್ಲಿದೆ ಎನ್ನುತ್ತಾರೆ ಯೌವನಿಗರು.

ಅದನ್ನೂ ತಳ್ಳಿಹಾಕುವಂತಿಲ್ಲ. ಈಗ ಸ್ನೇಹ ಮತ್ತು ಪ್ರೀತಿ ದೇಶಭಾಷೆಗಳ ಎಲ್ಲೆ ದಾಟಿದೆ. ಜಾತಿಯ ಹಂಗನ್ನು ಮೀರಿದೆ. ಹೀಗಾಗಿ ಸಾರ್ವತ್ರಿಕವಾದ ಒಂದು ಭಾಷೆ ಪ್ರೇಮಿಗಳಿಗೆ ಬೇಕಾಗಿದೆ. ಕನ್ನಡದಲ್ಲಿ ಪ್ರೇಮಿಸಲಿಕ್ಕೆ ಹೊರಡುವ ಹುಡುಗ ತನ್ನ ಮಿತಿಯೊಳಗೇ ಇರಬೇಕಾಗುತ್ತದೆ. ಕನ್ನಡದ ಹುಡುಗ ಪಂಜಾಬಿನ ಹುಡುಗಿಯನ್ನು ಪ್ರೀತಿಸಿದರೆ ಇಬ್ಬರಿಗೂ ಅರ್ಥವಾಗುವ ಒಂದು ಭಾಷೆಯಲ್ಲಿ ಅನುಸಂಧಾನ ಬೇಕಾಗುತ್ತದೆ. ನಮ್ಮ ಶಿಕ್ಷಣ ಆ ಇಬ್ಬರಿಗೂ ಅನುಕೂಲವಾಗುವ ಇಂಗ್ಲಿಷನ್ನು ಕೊಟ್ಟುಬಿಟ್ಟಿದೆ. ಅಲ್ಲಿಗೆ ಪಂಜಾಬಿಯೂ ಸಾಯುತ್ತದೆ; ಕನ್ನಡವೂ ಸಾಯುತ್ತದೆ. ಅವರಿಬ್ಬರೂ ಇಂಗ್ಲಿಷಲ್ಲಿ ಮಾತಾಡುತ್ತಾರೆ. ಮಕ್ಕಳು ಅರ್ಧ ಪಂಜಾಬಿ. ಅರ್ಧ ಕನ್ನಡ ಕಲಿಯುತ್ತವೆ. ಆದರೆ ಇಂಗ್ಲಿಷ್ ಮಾತನಾಡುತ್ತವೆ.

ಇವನ್ನೆಲ್ಲ ಮೀರಿಯೂ ಕನ್ನಡ ಬದುಕುವಂತೆ ಮಾಡುವುದು ಹೇಗೆ? ಕನ್ನಡದಲ್ಲಿ ಅರ್ಥಪೂರ್ಣ ಸಾಹಿತ್ಯ ಬಂದಿದೆ. ಬರುತ್ತಿದೆ ಎಂದು ನಂಬಿಸುವುದು ಹೇಗೆ? ಪ್ರೇಮಕ್ಕಿಂತ ಭಾಷೆ ದೊಡ್ಡದು ಎಂದು ಒಪ್ಪಿಸುವ ಶಕ್ತಿ ಯಾರಿಗಿದೆ?

ಈ ಹಿನ್ನೆಲೆಯಲ್ಲಿ 'ನಾನೇಕೆ ಓದುತ್ತೇನೆ' ಎಂಬ ಪ್ರಶ್ನೆಗೆ ಅರ್ಥ ಬರುತ್ತದೆ. ಒಬ್ಬ ಕನ್ನಡದ ಬರಹಗಾರ ಓದುವುದನ್ನು ಬರೆಯುವುದನ್ನು ಇವತ್ತೂ ಮತ್ತೊಬ್ಬ ಓದುತ್ತಾನೆ ಅನ್ನುವ ನಂಬಿಕೆಯಿಲ್ಲ. ಹೀಗಾಗಿ ಒಬ್ಬನೇ ಸಾಹಿತಿಯನ್ನು ಓದುವ ಇಬ್ಬರು ಮುಖಾಮುಖಿಯಾಗುವುದಿಲ್ಲ. ಯಾಕೆಂದರೆ ಎಂಥ ಶ್ರೇಷ್ಠ ಕೃತಿಯೇ ಆದರೂ ಸಾವಿರ ಪ್ರತಿ ಖರ್ಚಾಗುವ ಹೊತ್ತಿಗೆ ಏದುಸಿರುಬಿಡುತ್ತದೆ. ಐದು ಕೋಟಿ ಕನ್ನಡಿಗರ ಪೈಕಿ ಒಂದು ಕಾದಂಬರಿಯನ್ನು ಕೇವಲ ಒಂದು ಸಾವಿರ ಮಂದಿ ಓದುತ್ತಾರೆ. ಅಂದರೆ ಒಟ್ಟು ಜನಸಂಖ್ಯೆ ಶೇಕಡಾ .002 ಮಂದಿಗೆ ಮಾತ್ರ ಸಾಹಿತ್ಯ ಬೇಕು!

ಹಾಗಿದ್ದರೆ ನಾನೇಕೆ ಓದಬೇಕು?



# ಸೂರ್ಯ

●

**ಬಾರಿಕೆ ಶೈಲಜ ದಿನೇಶ**

ಮೂಡಂದ ನೀ ಮೂಡಿ ಬಾಕನ ಹೊತಾರೆ
ಮುಚ್ಚಿದೊ ಕಣ್ಣ್ ಆ ಚಂದ್ರ ತಾರೆ
ಅರ್‌ಳಿಟ್ಟು ನೋಡು ಕೆರೆಲಿದ್ದ ತಾವರೆ
ನಿತ್ತುಟ್ಟು ಮೇಲೆದ್ದ್ ಚೆಳಿ ಹಿಡ್ದ್ ಪಾರ!

ಪೇಳ್ತೊಳೊ ಸ್ವಾಗತಸ ಪಾಡಿಕಂಡ್ ಪಕ್ಕಿಗ
ಕೊಣ್ಕಂಡ್ ಗಾಳಿ ಬರ್‍ತುಟ್ಟು ಬ್ಯಾಗ ಬ್ಯಾಗ
ಇಂವ ಪೊರ್ದತ್ ಪೊತ್ತ್‌ಕಂಡ್ ನೇಗ್‌ಲ್‌ನೊಗ
ಕೇಳ್ದನ ನೀ ಅಂವನ ಹಾಡ್‌ನ ರಾಗ ॥

ಬಾತ್ ಹೊಳ್ಪು ನಿತ್ತ ಹರಿವ ನೀರಿಗೆ
ದೊಡ್ಡ ಸಣ್ಣ ಮರದ ಚಿಗ್‌ರ್ ಸೊಪ್ಪುಗೆ
ಸೊಪ್ಪುಲಿ ಇದ್ದ ಮುತ್ತ್‌ನಂತ ಹನಿಗೆ
ಇಳಿ ವಯಸ್ಸ್‌ನ ಚಾಂಪ ಚಾಮೆವ್ವನ ಕಣ್ಣ್‌ಗೆ ॥

ಎಂತ ಸಂಬಂಧನೊ ನಿಂಗೂ ಭೂಮಿಗೂ ಗೊತ್ತ್‌ಲೆ
ಮೂಕ ನಾ, ಏನ್ ಹೇಳಿಕೂ ಮಾತ್ ಬಾದುಲೆ
ನೀ ಇಲ್ಲದೆ ನಾವ್ಗೆ ಯಾವ ಕೆಲ್ಸನೂ ಆದುಲೆ
ನಮ್ಮ ಬಾಳ್‌ನ ಉದ್ದದ ದಾರಿನು ಸಾಗುದುಲೆ ॥

ಪೊಡ್ವಲಿ ಮುಳಿಯ ಮುಗ್ಸಿ ನಿನ್ನ ಕೆಲ್ಸನ
ಮತ್ತೆ ಕಪ್ಪಾದೆ ಮೇಲೆ ವಿಶಾಲ ಬಾನ್
ಕಷ್ಟ ಸುಕ ಎರ್‍ಡೂ ಇದ್ದು ಈ ಜೀವನ
ಕಲ್ಸಿ ಕೊಟ್ಟಿಯಾ ಕತ್ತಲೆ ಬೊಳ್ಪುನಾಟಲಿ ನೀತಿನ ॥

---

**ಬಾರಿಕೆ ಶೈಲಜ ದಿನೇಶ**
ತಾವೂರು ಗ್ರಾಮ, ಭಾಗಮಂಡಲ ಅಂಚೆ. ಮಡಿಕೇರಿ
8277469622



# ಕೊರೊನಾ ಕಾಲ

●

ಎಸ್.ಕೆ. ಈಶ್ವರಿ

ಮನೆಲಿ ಕುದ್ದ್ ಬರೆವುಕೆ ವಳ್ಳ ಕಾಲ ಬಾತ್
ಅದೆ ಕೊರೊನಾ ಕಾಲ ಪೊರಗೆ ಪೋಗಿಬಾಕೆ ಇಲ್ಲೆ
ಕೊರೊನ ಕೊಟ್ಟ ಸಮಯದ ಅವಕಾಸದ ಸಂದರ್ಭ
ಮನೆಲಿ ಇರ್ಕನ ಬರ್ದೋ಼ ಬಾರಿ ಸಂಗತಿನ ಕತೆಗಳ ॥

ಇನ್ನ್ ಹಳೆಕಾಲದ ಅಡುಗೆಗ ಸುರು ಆತ್
ಹಂಗೆ ನಾಡ್ ಮದ್ದ್ ಮತ್ತೆ ಸುಮಾರ್ ಕಸಾಯಿಗ
ಇಲ್ಲಿಗೆ ಮುಟ್ಟಿ ಸಿಹಿ ತಂಪು ಹಣ್ಣ್‌ಗಳ ರಸಗಳ
ಪ್ಲಾಸ್ಟಿಕ್ ಕುಪ್ಪಿಗಳ್‌ಲಿ ಬಣ್ಣ ಬಣ್ಣದ ಹೊಡಿಗಳ ಸೇರ್ಸಿ ॥

ನೀರಿಗೆ ಸ್ವಲ್ಪ ಹಣ್ಣ್‌ನ ರಸ ಕೂಡ್ಸಿ ಕುಪ್ಪಿಗೆ ತುಂಬ್ಸಿ
ಅದಕ್ಕೊಂದು ಹೆಸರ್ ತಣ್ಣಗೆ ಕುಡಿಯಕೆ
ಈಗ ಮನೇಲಿ ಕಾಯ್ಸಿದ ಆರೋಗ್ಯಕ್ಕಾಗಿ ಕಸಾಯಿಗಳ
ಕುಡ್ಕಂಡ್ ಬೇಸಾಯ ಮಾಡಿಕಂಡ್ ಈಗ
ಎಲ್ಲವೂ ರೈತರಾಗಿ ದುಡಿಮೆ ಮಾಡಿ ಬದುಕುವ ಕಾಲ ॥

ಅಂದೆಲ್ಲಾ ಪ್ಯಾಟೆ ಪಟ್ಣಲಿ ಸೇರಿ ಸಣ್ಣ ಸಣ್ಣ ಉದ್ಯೋಗದಲಿದ್ದೋ
ಈಗ ದೂರ ದೂರ ನಿತ್ಕಂಡ್ ಕೆಲ್ಸ ಮಾಡುವ ಕಾಲ
ಕೈ ಆಗಾಗ ತೊಳ್ದ್ ತೊಳ್ದ್ ಸ್ವಚ್ಛತೆಂದ ಇದ್ದ್
ಕೊರೊನಾನ ದೇಶಬುಟ್ಟು ಹೋಗುತ ಹೇಳುವ ಕಾಲ ॥

---

**ಎಸ್.ಕೆ. ಈಶ್ವರಿ**
ಮೇಕೇರಿ ಗ್ರಾಮ, ಕಗೋಡ್ಲು ಅಂಚೆ, ಮಡಿಕೇರಿ, ಕೊಡಗು – 571 201

# ತೊಟ್ಟಿಲ ಹಾಡು

## (ಗಂಡ್‌ಕೂಸುನ ಸುರು ತೊಟಿಗಿಲ್‌ಗೆ ಹಾಕಿ ಒಚ್ಚ್‌ಕನ ಹೇಳುವ ಪದ)

●

**ಸೀತಾರಾಮ ಕೇವಳ**

ಪ್ಟೂಂಪ್ಟೂಂ ಪ್ಟುಂಪ್ಟುಂಪ್ಟೂಂ ಪ್ಟೂಂಪ್ಟೂಂ ಪ್ಟುಂಪ್ಟುಂಪ್ಟೂಂ
ಪ್ಟೂಂಪ್ಟೂಂಪ್ಟೂಂ ಪ್ಟುಂಪ್ಟೂಂ ಪ್ಟೂಂಪ್ಟೂಂಪ್ಟೂಂ
ಜೋಜೋಜೋಜೊಜೊಜೋಜೋಜೋಜೊಜೊ
ಜೋಜೋಜೊಜೋಜೋಜೋಜೋಜೋ ॥

ಲೋಕದ ತೊಟಗಿಲ್ ಕಟ್ಟ ಸಿರಿಕೃಷ್ಣ ಮಲ್ಗಿಟು
ಒಸ್ರಣ್ಣ ಎಲ್ಲಪ್ರು ಒಸ್ರಣ್ಣ ಒಸ್ರಕ್ಕ ಒಚ್ಚಿಕೆ ಒಸ್ರಕ್ಕ
ಕುಂಞಿ ಮೋನನಾಂಗೆ ಕುಸಿಲಿ ನಗಪ್ಪುಟ್ಟು
ಒಸ್ರಣ್ಣ ಎಲ್ಲಪ್ರು ಒಸ್ರಣ್ಣ ಒಸ್ರಕ್ಕ ಒಚ್ಚಿಕೆ ಒಸ್ರಕ್ಕ ॥
ಒಸ್ರಕ್ಕ ಅಣ್ಣಂದರ್ ಒಸ್ರಪ್ಪ ಬಂದ್ ಹಾರೈಸಿಕೆ ಒಸ್ರಪ್ಪ
ಒಸ್ರಕ್ಕ ಅಣ್ಣಂದರ್ ಒಸ್ರಪ್ಪ ಬಂದ್ ಹಾರೈಸಿಕೆ ಒಸ್ರಪ್ಪ ॥ಲೋಕದ॥

ಜೋಜೋಜೋಜೊಜೊಜೋಜೋಜೋಜೊಜೊ
ಜೋಜೋಜೊಜೋಜೋಜೋಜೋಜೋ ॥
ಅಯ್ಯಪ್ಪ ಅಜ್ಜಿಜ್ಜ ಅಕ್ಕನವು ಅಣ್ಣನವು
ಅಯ್ಯಪ್ಪ ಅಜ್ಜಿಜ್ಜ ಅಕ್ಕನವು ಅಣ್ಣನವು
ನೆಂಟ್ರ್‌ಗಳೆ ಎಲ್ಲ ಸಮ್ಮಂದದವೆ
ಒಸ್ರಕ್ಕ ಅಣ್ಣಂದರ್ ಒಸ್ರಪ್ಪ ಬಂದ್ ಹಾರೈಸಿಕೆ ಒಸ್ರಪ್ಪ ॥ಲೋಕದ॥

ಮೂರೇ ಹಜ್ಜಲಿ ಲೋಕನೆ ಆಳ್ದಂತ ॥
ಮೂರೇ ಹಜ್ಜಲಿ ಲೋಕನೆ ಆಳ್ದಂತ
ನಾರಾಯಣ ಮಲ್ಗಿಟು ನೋಡಿಲ್ಲಿ
ಒಸ್ರಕ್ಕ ಅಣ್ಣಂದರ್ ಒಸ್ರಪ್ಪ ಬಂದ್ ಹಾರೈಸಿಕೆ ಒಸ್ರಪ್ಪ ॥ಲೋಕದ॥

ನಡುನ ಕಣ್ಣ್‌ಲಿ ಕಿಚ್ಚಿನ ಇಸಿಕಂಡ ॥
ಈಸ್ವರ ಮಲ್ಗಿಟು ನೋಡಿಲ್ಲಿ
ಒಸ್ರಕ್ಕ ಅಣ್ಣಂದರ್ ಒಸ್ರಪ್ಪ ಬಂದ್ ಹಾರೈಸಿಕೆ ಒಸ್ರಪ್ಪ ॥ಲೋಕದ॥

ಹೆತ್ತವ್ವ ಅಪ್ಪಂಗೆ ಬೊಳ್ಪಾಗಿ ಬಂದಂತ
ಜಾಮು ಜಾಜೆ ಮಲ್ಗಿಟು ನೋಡಿಲ್ಲಿ
ಒಸ್ರಕ್ಕ ಪಲ್ಲಿಕೆ ಒಸ್ರಣ್ಣ ತಲೆ ಮೇಲೆ ಕೈ ಇಸಿಕೆ ಒಸ್ರಪ್ಪ ॥ಲೋಕದ॥

ಸೀತಾರಾಮ ಕೇವಳ Cell: 94487 25813 E-Mail: principalseetharamakevala@gmail com

# ಯಾಕವ್ವ ಬಂದಿಯ ಕನ್ಸಲಿ?

ಕಾಡ್‌ತನೇ ಉಟ್ಟೊ ಈ ಮನೆನ ನೆನ್ಪು?
ಯಾಕವ್ವ ಬಂದಿಯ ಆಗಾಗ ಕನ್ಸಲಿ!!
ಕಳ್ತ್ ವರ್ಷ ಹತ್ತರ ಮೇಲೆ ನೀ ಸೊರ್ಗ ಸೇರಿ ॥

ಬೆಗರಿಳ್ಸ್ ಅಪ್ಪ ನೀ ದುಡ್ದ್ ಸಂದ ಮನೆ ಇದ್
ಉಟ್ಟೊ ಇದ್ಕ ಸಮ ಬೇರೊಂದ್ ಸೊರ್ಗ?
ಹೊಲಗದ್ದೆ ತೋಟಗಳೇ ನಿಮ್ಮ ಗುಡಿಗ ॥

ಹಿರಿಯರ ಮಾತ್ ಇದ್:
ಕೊಡಿ ಜೆಲೆನ ಓದ್‌ಗೆ. ಮರಿಯದಿರಿ ಕೃಷಿನ ।
ಹಗಲೆಲ್ಲ ಅಡ್ಡಾಡಿ ಬಾನೆಲ್ಲ ಹಾರಾಡಿ
ದಣ್ವ ಹಕ್ಕಿಗೆ ಬೇಕು ಮರದ ಕೊಂಬೆನ ಗೂಡ್ ॥

ಯಾಕವ್ವ ಬಂದಿಯ ನೀ ನನ್ನ ಕನ್ಸಲಿ?
ಹಾಕಿತಲೆ ಬಲೆನ ಅದ್ ನನ್ನ ಮೇಲೆ!
ನಿನ್ನ ಆರ್ತಿನ ಸುದ್ದಿಗಳ ಹೇಳ್ನೆ ನಾ ಬಿಡ್ಸಿ ಬಿಡ್ಸಿ ॥

ನೀ ಮುದ್ದ್ ಮಾಡ್ತಿದ್ದ ಕಾಳಿನ ಸಣ್ಣಕರ್
ಆಗುಟದ್ ಲಕ್ಷಣದ ಗತ್ತ್‌ನ ಎತ್ತ್ ।
ಎಣೆತಾಕ ಅದ್ಕೊಂದ್ ಹೋಗಿದ್ದೊ ಕುಳ್ಕೊಂದಕೆ ॥

ನೀ ನೆಟ್ಟ ಸೂಜಿಮಲ್ಲಿಗೆನ ಹೂಬೊಳ್ಳಿ
ಹಬ್ಬಿಟು ಬೇಲಿ ಮೇಲೆ, ಹಟ್ಟಿನ ಕುಮೋಳ್ ಮೇಲೆ ।
ಹೊತ್ತ್ ತಂದದೆ ಮಂದ ಸುಗಂಧನ ಸತತ ಬೀಸ್‌ವ ಗಾಳಿ ॥

ಜಾಲ್ ಮೂಲೆನ ಬಸಳೆ. ಹೀರೆ ಚಪ್ಪರನ ನೋಡ್
ಕೆಂದಾಳೆ, ರಸಬಾಳೆ ನೋಡ್, ಹಿಂಗಾರದ ಸಿರಿನ ನೋಡ್ ।
ನೋಡ್ ಬಂದೊಮ್ಮೆ ನನ್ನವ್ವ, ನೀ ಹೊದ್ಕಿದ್ದ ನಿನ್ನ ಮನೆನ ॥

---

**ಮಾವಜಿ ರಾಮಣ್ಣ ಅಚ್ಯುತ**
# 606, 7ನೇ ಮೈನ್, 3ನೇ ಬ್ಲಾಕ್, 3ನೇ ಸ್ಟೇಜ್, ಬಸವೇಶ್ವರ ನಗರ
ಬೆಂಗಳೂರು – 560 079 ಮೊಬೈಲ್ : 9845553206

# ಹಿಂದೆಲ್ಲ ನಡಿವ ಮೊದುವೆಗ



ಭವಾನಿಶಂಕರ್ ಹೊದ್ದೆಟ್ಟಿ



ಹಿಂದೆನ ಕಾಲಲಿ ಮಂಜಂಗೆ ಮೊದುವೆಗೆ
ಅಪ್ಪವ್ವನೆ ಗೂಡನ ನೊಡ್‌ತಿದ್ದೊ ।
ಮಗಳಿಗೆ ಕೂಡ ಅಪ್ಪವ್ವನೆ ಹೋಗಿದ್
ಗಂಡ್‌ನ ಹುಡ್‌ಕಿ ಹಿಡಿತಿದ್ದೊ ॥

ಅಪ್ಪವ್ವನು ಅಂದ್ ನೋಡಿದ ಗೂಡೆನ
ಮಂಜನು ಒಪ್ಪಿದ್ ಮೊದುವಾಕು ।
ಮಗಳನು ಅಸ್ಟೆ ಅಪ್ಪವ್ವನೆ ನೋಡಿದ
ಗಂಡ್‌ನ ಗಂಡಂತ ಒಪ್ಪೊಕ್ಕು ॥

ಅಂತೊಂದ್ ಪದ್ಧತಿ ಅಂದ್‌ನ ಕಾಲಲಿ
ಹಳ್ಳಿ ಕಡೆಲೆಲ್ಲ ನಡೆತಿತ್ತ್ ।
ಮೊದುವೆ ದಿನನೆ ತಾಳಿ ಕಟ್ಟಿಕನ
ಒಬ್ಬನ ಒಬ್ಬವು ನೋಡಿಕಾತಿತ್ತ್ ॥

ಮೊದುವಾಗುವವರೆಗೆ ಗೂಡೆನ ಮನೆಗೆ
ಗಂಡಂವ ಹೋಕೆನ ಬೊತ್ತ್ ।
ಹಾಂಗಾಗಿ ಮೊದುವೆ ಆಗವೆ ಕೂಡ
ಮನ್ಸ್‌ಲಿ ಬೇಜರ ಇರ್‌ತಿತ್ತ್ ॥

ಆ ಕಾಲಲಿ ಮನೆ, ತೋಟ ಕೆಲ್ಸನ ಮಾಡೊವು
ಹಳ್ಳಿನ ಮನೆಗೆ ಬೇಕಾಗ್ತಿತ್ತ್ ।
ಅಂತ ಹೆಣ್ಣ್‌ಗ ಸೊಸೆಯಾಗಿ ಬಂದರೆ
ಮನೆಯೊಳಗತಿ ಕುಷಿ ಇರ್‌ತಿತ್ತ್ ॥

ಅಪ್ಪನ  ಎದ್ರ್ ಮಂಜನೆ ಬಂದ್‌ದ್
ನಂಗೆ ಮೊದುವೆ ಮಾಡಿಂತ ಹೇಳ್‌ತಿತ್ಲೆ
ಅಪ್ಪನ ಎದ್ರ್ ಏನ್ ಮಾತಾಡಿಕು
ಮಕ್ಕಳಿಗೆ ಧೈರ್ಯನೆ ಇರ್‌ತಿತ್ಲೆ ॥

ಅಸ್ಟ್ ಬಿಗಿಯಾಗಿ ಮಕ್ಕಳ ಸಾಂಕುವೊ
ಎಲ್ಲಾ ಹಳ್ಳಿಲೂ ಅಪ್ಪ ಅವ್ವಂದರ್ ।
ಅಪ್ಪಂಗೆ ಹೆದರಿ ಮನೆ ಮಕ್ಕ ಅಣ್‌ಂಗುವೊ
ಮಕ್ಕ ಬಾಕಿಲೆ ಯಾರುನು ಅಪ್ಪನೆದ್ರ್ ॥

ಮಕ್ಕಳಿಗೆ ಏನೆ ಬೇಕಿದ್ದರು ಕೂಡ
ಅವ್ವಂಗೆ ಹೇಳುವೊ ಮಕ್ಕೆಲ್ಲ
ಅಪ್ಪ ಕುಷಿಲಿ ಇರಿಕಾಕೆನ ನೋಡಿದ್
ಅವ್ವ ಹೇಳಿ ಕೊಡ್ಸುದು ಮಕ್ಕ ಕೇಳ್ದೆಲ ॥

ಮೊದುಮಕ್ಕಳೀಗೆ ಹಬ್ಬಿಕನ ಕೊಡ್ಪ ದುಡ್ಡ್‌ನ
ಏನ್ ಕೊಟ್ಟೊಳೊಂತ ಕರ್ದ ಹೇಳುತಿದ್ದೊ ।
ಅಲೆ ವಕ್ಕಲಿ ಇದ್ದೊವು ಯಾರೊ
ಪುಸ್ತಕಲಿ ಅದರ ಬರ್ದಿಸುತಿದ್ದೊ ॥

ಅಂದೆಲ್ಲ ಮೊದುವೆಗೆ ಕೂಡುವಾಪಣ ಅ........
ಒಂದ್ ರೂಪಾಯಿಂದ ಐದ್ ರೂಪಾಯಾಗಿತ್ತ್
ಕೊಡುವ ಹಣನ ಕರ್ದ್ ಹೇಳುವ ಕಾರಣ
ಕಮ್ಮಿ ಕೊಡವಂಗೆ ಬೇಜರ ಆತಿತ್ತ್ ॥

ಮೊದುವೆಲಿ ಕೊಡವ ದುಡ್ಡ್‌ನ ಬದಲ್
ಅಡ್ಗೆ ಪಾತ್ರೆ ಸಾಮಾನ್‌ಗಳ ಜನ ಕೊಡುತಿದ್ದೊ
ಕಾರಣ ಹಳ್ಳಿಲಿ ಅಂದ್‌ನ ಜನಂಗೆಲ್ಲ
ಕಂಚಿ, ತಾಮ್ರದ ಪಾತ್ರೆಗಳನೆ ಬಳ್ಸ್‌ತಿದ್ದೊ ॥

ಹಂದಿ ಕೋಳಿಲ್ಲದೆ ಬಡವರ ಮೊದುವೆನು
ನಮ್ಮೂರ್‌ಲೆಲ್ಲನು ನಡೆತಿತ್ಲೆ ।

ಅಪ್ಪದಿಟ್ಟ್, ಇಡ್ಲಿನ ಊಟಕೆ ಕೊಡದವು
ಹಳ್ಳಿಗಳಲಂದ್ ಯಾರಿತ್ಲೆ ॥

ಜೀವದಸುರಯನು ಚಾಳೆನಕಳ್ಳನು
ಆ ಕಾಲದ ಜನಂಗ ಕುಡೆತಿದ್ದೊ ।
ಇಂದ್‌ನ ಬ್ರಾಂಡಿ ಬೀರ್‌ಗ ಇತ್ತ್‌ಲೆ
ಇದರೆಲ್ಲ ಕಂಡವ ಯಾರಿದ್ದೊ ॥

ಸರಯ ಕುಡ್ದ್‌ದ್ ಮೊದುವೆಗೆ ಬಾವು
ಅಂದ್‌ನ ದಿನಲತಿ ಕಮ್ಮಿದ್ದೊ ।
ಹೋದಲಿ ಬಂದಲಿ ಎಲ್ಲಾ ಕಡೆಲಿನು
ಜನ ಮೊರ್ಯಾದಿ ಕಾಪಾಡಿ ಕಂಡಿದ್ದೊ ॥

ಕೊಟ್ಟ ಹೆಣ್ಣ್ ಕುಲಂದ ಹೊರಗೆಂತ
ಗಾದೆನ ಮಾಡ್ಯೊಳೊ ಜನ ಆಗ ।
ಇಂದ್ ಹೆಚ್ಚಿಗೆ ಓದಿದ ಗೂಡೆಗೆಲ್ಲ
ಗಂಡ ಬುಟ್ಟರು ಹೆದುರುದಿಲ್ಲವು ಈಗ ॥

ಕೆಲವು ಗಂಡಗ ಕೊಡುವ ಹಿಂಸೆನ ತಾಳದೆ
ತೌರ್‌ಗೆ ಬಂದವೆ ಹೆಣ್ಣ್‌ಗೀಗ ।
ಹೆತ್ತ ಅವ್ವಂಗೆ ಹೆಗ್ಗಣ ಮುದ್ದುಂತ
ಕೈ ಬುಡ್ದುಲೆ ಮಗಳ ಮನೆವೀಗ ॥

ಕಾಲ ಕಳ್ದ್‌ದ್ ಹೋದಾಂಗೆ ಜನರ
ಸ್ಥಿತಿಗತಿ ಎಲ್ಲನು ಬದಲಾಗುಟು ।
ಹೆತ್ತೊವು ಹೆಣ್ಣ್ ನೋಡುವ ಪದ್ಧತಿ
ದಿನ ಕಳ್ದಾಂಗದ್ ಬುಟ್ಟೋಗ್ಟು ॥

ಮಂಜ ಮಗಳಿಗೆ ಜೋಡಿ ಹುಡ್ಕುವ ಕೆಲ್ಸ
ಅಪ್ಪವ್ವಂಗೆ ಈಗ ಕಮ್ಯಾಗ್ಟು ।
ಶಾಲೆ ಕಾಲೇಜಿಲಿ ಆಫೀಸ್‌ಗಳ್ಳಿ
ಲವ್ ಮಾಡುವ ಕೆಲ್ಸ ನಡಿತುಟ್ಟು ॥

# ಹಸೆ

ಭರತೇಶ ಅಲಸಂಡೆಮಜಲು

ಜನಪದ ಸಂಸ್ಕೃತಿಗೆ ಸಮ್ಮಂದ ಆವಂತ ಚಿತ್ರಕಲೆ. ಮನೆ ಅಲಂಕಾರ. ವಸ್ತುನ ಒಟ್ಟುಗು ಇಸಿದ್ ಪ್ರೊಲ್ಸುನ ನೋಡ್ದಂತ ಆರಾದನಾ ಸಂಸ್ಕೃತಿಂದ ರೂಪ ತಾಳಿದಂತದ್ ಅರೆಬಾಸೆ ಕೂಡ್ಕುಟುಂಬದ ಆಚರಣೆಗಳ್ಳ ಈಗಲೂ ಉಟ್ಟು. ಇಂತದರ್ಲಿ ಕೆಡ್ಡಾಸ. ಬಿಸು. ನಾಗರಪಂಚೆಮಿ. ಚೌತಿ. ಅಸ್ಟೆಮಿ. ದೀಪಾವಳಿ ಹಬ್ಬಂತ ವರ್ಸಕ್ಕೊಮ್ಮೆ ಮಾಡ್ದ ಹಬ್ಬಗ. ಹಂಗನೆ ತೊಟ್ಲ್ ಮೊದ್ವೆ. ನೆರ್ದ ಮೊದ್ವೆ. ಬಯ್ಕೆ ಮೊದ್ವೆ. ಮದ್ವೆಂತ ಜೀವನಾವರ್ತನಲಿ ಆಚರಣೆಗ ಉಟ್ಟ್.

ಜನಪದರ್ಮನೆನ ನೆಲಕ್ಕೆ ಸೆಗಣಿ ಕರೆದು. ಮನೆ ತುಂಬಾ ಚಿತ್ರ ಬುಡಿಸ್ತಿದ್ದೊ. ದೇವಸ್ತಾನಲಿ ಕಾಂಬಕೆ ಸಿಕ್ಕ್ವ ರಂಗೋಲಿ. ದೇವರ ಚಿತ್ರ ಸಹ ಬುಡಿಸ್ತಿದ್ದೊ. ಹಕ್ಕಿ ಹಣ್ಣ್ಕ್ಕಗ ರಂಗೋಲಿ ಬುಡ್ಸಿ ತಮ್ಮ ಮನೆನ ಪ್ರೊಲ್ಸುನ ಮಾಡ್ತಿದ್ದೊ. ಇದ್ ಒಂದು ಸಂಪ್ರದಾಯದ ರೀತಿಲಿ ಬೆಳ್ಕಂಡ್ಬಂದದ್. ಹೀಂಗೆ ಜನಪದರ ಪಂಡ್ಗನ ಮನೆನ ಗೋಡೆ. ನೆಲ. ಮಾಳಿಗೆಲಿ ಚಿತ್ರಕಲೆಗ ಕಾಂಬಕೆ ಸಿಕ್ಕದೆ. ಕೆಲವು ವಿಸೇಸ ಸಂದರ್ಬಲಿ ಚಿತ್ರ ಬುಡ್ಸುವ ವಿಸೇಸ ಕ್ರಮಗ ಒಳೊ. ಇಂತದೆ ಸಂಪ್ರದಾಯನ ನೆಲೆಲಿ ಮೊದ್ವೆಲಿ ಹಸೆ ಬರಿಯೊದು ಮತ್ತೆ ಹಸೆ





ಹಾಕುದು ಎಂಬ ಕ್ರಮುಗ ನಡೀತ ಒಳೊ.

ಹಸೆನ ಅರೆಬಾಸೆ ಮತ್ತೆ ತುಳು ಮಾತಾಡ್ವ ಗೌಡ ಸಮುದಾಯದವ್ರು ಮೊದ್ರಂಗಿ ಸಾಸ್ತ್ರದ ದಿನ ಬರ್ದವೆ. ಹಸೆ ತೇಳ್ರ್ ಸುಬಕಾರ್ಯರ್ಲಿ ಬಳ್ಸುವ ಕೈ ಕುಸುರಿ ಕೆಲಸನ ಪೊರ್ಲುರ್ನ ಕೈಚಿತ್ರ. ಮೊದ್ರಂಗಿ ದಿನ ಹೈದ ಅತವ ಗೂಡೆ ಮಲ್ಗ್ವ ನಡುಮನೆನ ಗೋಡೆಲಿ ಬರ್ದವೆ. ಅದ್ ಮೂಲಿಮನೆಲಿ ಕನ್ನೆಕಂಬ ಇರ್ವ ಜಾಗೆ ಅಗಿದ್ದದೆ. ಇದರ್ಲಿ ಹಾಕ್ವ ಬಣ್ಣಗ ನಮ್ಮ ಸುತ್ತ ಇರ್ವ ಪರಿಸರನ ಮೂಲವಾದಾಗಿದ್ದ್ ಅಕ್ಕಿಹಿಟ್ಟ್, ಸುಣ್ಣ, ಗಂದ ಬಳ್ಸಿವೆ. ಪಂಡ್ನ ಕಾಲಲಿ ಇದರ ಮೊಣ್ಣ್ಕ್ ಗೋಡೆಲಿ ಬರೆತಿದ್ದೊ, ಅದ್ ಜಾರಿ ಲಾಯ್ಕಾಣ್ತಿತ್ತ್. ಇದರೊಟ್ಟಿಗೆ ಅದ್ಕೆ ಬಣ್ಣ ತುಂಬ್ಸಿಕೆ ಹಾಲ್, ಅರ್ಸಿನ, ಕಾರೆಕಾಯಿನ ಚೊಳ್ಸಿ ತಯಾರ್ಮಾಡ್ದ ಪ್ರಾಕೃತಿಕ ಚೊಣ್ಣಗಳ ಚೊಳಸ್ತ ಯಿದ್ದೊ. ಆದರೆ ಈಗನ ಕಾಲಲಿ ಹಸೆನ ಸುಣ್ಣದ ಕಡ್ಡಿಲಿ ಬೊರ್ದವೆ.

ಅರೆಬಾಸೆ ಪ್ರದೇಸದ ಜನ ಮನೆ ಕಟ್ಟ್‌ಕನ ಮನೆನ ಎದ್ರ್ನ ಬಾಗ್ಲ್ನ ಮೂಡು ಅತವಾ ಉತ್ತರ ದಿಕ್ಕ್‌ಗ ಇಸಿವೆ. ಹಿಂಗೆ ಮನೆಗೆ ಹುಗ್ಗ್‌ಕನ ಕೂಡ್ಲೆ ಸಿಕ್ಕುದು ಮನೆನ ಎದ್ರ್ನ ಜಗಲಿ. ಇದರ ದಾಟಿದ್ಮೇಲೆ ನಡ್ಮ ಜಗಲಿ ಅದ್ ಒಳಗೆನ ನಡು ಅಗಿದ್ದದೆ. ಚಾವಡಿನ ಮೂಡುಬಾಗ ಅತವ ಉತ್ತರ ಬಾಗಕ್ಕೆ ಇರ್ವ ಗೋಡೆನ ಹಸೆಗೋಡೆಂತ ಹೇಳಕ್. ಇದರ್ಲಿ ಹಸೆ ಬರ್ದವೆ. ಇಲ್ಲಿ ಗೋಡೆನ ಮದ್ಯಬಾಗಲಿ ಸುಮಾರ್ 5 ಅಡಿ ಉದ್ದ ಅಗಲ ನೆಲಕ್ಕೆ ಚೌಕದ ಜಾಗೆಗೆ ಸೆಗಣಿ ಸಾರ್ಸಿ ಕೆಂಪು ಮಣ್ಣ್ ಜ್ಜೆ ಮತ್ತೆ ಬಿಳಿ ಬಣ್ಣಂದ ಹಸೆನ ಬರ್ದವೆ.

ಹಸೆ ಬರಿಯುಕನ ಕೆಲವು ನಂಬಿಕೆಗ ಉಟ್ಟು. ಮೊದ್ಲೆಲಿ ಹಸೆನ ಯಾರುನೂ ಬರಿಯಕ್. ಅವ್ಕೆ ವಿಸೇಸವಾಗಿ ಹೇಳ್ಳಿದೆಲೆ ಮರ್ಯಾದಿ ಕೊಡೊಕು. ಸಮ್ಮಂದಿಕ ಮನೆಯವ್ರು ಬೇರೆಯವ್ರರಿಯುಕನ ಹೆಂಗಂದರೆ ಅವ್ಕೆ ರವ್ಕೆ, ಕಾಯಿ, ಮಡಿಲ್ಗೆ ಅಕ್ಕಿ ಹಾಕಿ ಮೊರ್ಯಾದಿ ಕೊಟ್ಟವೆ. ಒಮ್ಮೆ ಹಸೆನ ಬರ್ದರೆ ಅದರ ಉಜ್ಜಿಕೆ ಬೊತ್ತು. ಉಜ್ಜಿರೆ ಅಪಸಕುನಾಂತ ನೆನ್ಸುವೆ. ಒಮ್ಮೆ ಬರ್ದ ಹಸೆಚಿತ್ರನ 3 ವರ್ಸ ಮುಟ್ಟ ಉಜ್ಜಿಕೆ ಬೊತ್ತು ಅಂತ ಸಹ ಕೆಲವು ನಂಬಿಕೆ ಉಟ್ಟು. ಆದರೆ ಒಂದ್ವರ್ಸ ಆಕೆ ಮುಂದನೆ ಆ ಮನೆಲಿ ಬೇರೆ ಮೊದ್ವೆಗ ಆದರೆ ಆ ಜಾಗೆನ ಬುಟ್ಟ್‌ಕ್ಕಲೆನೆ ಇನ್ನೊಂದು ಹಸೆ ಬರಿಯಕ್. ಎರಡ್ಮದ್ವೆಗ ಒಟ್ಟಿಗೆ ಇದ್ದರೆ ಒಂದೇ ದಂಡಿಗೆ ಇರ್ವ ಹಸೆನ ಬರ್ದವೆ. ಏನಾರೂ ಪರಮೋಸುಲಿ ಹಸೆನ ಬರಿಯಕೆ ಬುಟ್ಟು

ಹೋದರೆ ದಾರೆಗೆ ಮುಂದೆ ಆದರೂ ಬರ್ದುಗ್ಗೊಕು.

### ಹಸೆ ಬರಿಯೊದ್

ಮೇಲ್‌ಕಟ್ಟ್ ಅಡಿಲಿ ಮೊದ್ರಂಗಿ ಸಾಸ್ತ್ರ ಮಾಡಿಕೆ ಕುದ್ರಿಸಿಕಾಕನ ಮನೆನ ಯಜಮಾನ ಚೊಂಬುಲಿ ನೀರ್ನ ಊರ ಗೌಡ್ರಿಗೆ ಕೊಟ್ಟ್ ಹಸೆ ಬರಿಯವುಕೆ ಹಸೆ ಬರಿಯುಕೆ ಒಕ್ಕಣೆ ಕೊಟ್ಟವೆ. ಊರ ಗೌಡ್ರ ಒಪ್ಪಿಗೆ ಮೇಲೆ ಸೋದರದವು ಹಸೆ ಬರಿಯೊಕು. ನಡುಮನೆನ ಗೋಡೆಲಿ ಮೂಡ್ ದಿಕ್ಕ್‌ಗ ಮೋರೆ ಬಾಂವ ಹಾಂಗೆ ಬಲಕ್ಕೆ ಸೂರ್ಯ ಎಡಕ್ಕೆ ಚಂದ್ರನ ಚಿತ್ರ ಬರ್ವಂಗೆ ಬರಿಯೊಕು. ಪಂಡ್ಲಿ ಅಕ್ಕಿ, ಸುಣ್ಣ, ಗಂದಚಿಪ್ಪಿಲಿ ಹಾಕಿ ಒಂದ್ ಸಪೂರ ಕೋಲ್ಗ ಮೊಡ್ಕ್ಯಾಳ ಕೊಟ್ಟ ದಳಿಯ ಅರ್ವನ ಸುತ್ತಿ ಮುಣ್‌ಂಗಿಸಿ ಬರಿಯೊಕು. ಬಲಬದಿನ ಚಿತ್ರಲಿ ಮೊದ್ಮಂಜನ ಹೆಸ್ರು, ಎಡಬದಿನ ಚಿತ್ರನ ಕೆಳಗೆ ಮೊದ್ಮೋಳಿಗೆನ ಹೆಸರ್ಬರಿಯೊಕು. ಹೈದನ ಚಿತ್ರಲಿ ಹಸೆನ ಮೇಲೆನ ಬಾಗ ಗೋಪುರದಂಗೆನೂ ಗೂಡೆನ ಹಸೆನ ಮೇಲೆನ ಬಾಗನ ಹಂಞ ಬೊಗ್ಗಿಸಿ ಬರ್ದವೆ. ಕೆಲವು ಕಡೆ ಹೈದನ ಹಸೆನ '/\' ಅಕಾರಲಿಯೂ, ಗೂಡೆನಹಸೆನ '∩' ಅಕಾರಲಿ ಇದ್ದದೆ. ಎರಡ್ ಚಿತ್ರದ ನಡೂಲಿ ಕಳಸ ಇಲ್ಲರೆ ಸುತ್ಯೆನ ಚಿತ್ರ ಬುಡ್ಲುವೆ. ಹಸೆ ನೋಡಿಕೆ ಎರಡ್ ಮನೆಯಂಗೆ ಕಂಡದೆ. ಹಸೆಲಿ ಗಂಡ್ನ ಸೂರ್ಯಂಗೂ ಹೆಣ್ಣ್ನ ಚಂದ್ರಂಗೂ ಹೋಲಿಸ್ಲೆ. ಸೂರ್ಯನ ಬೆಳಕ್ಲಿ ಚಂದ್ರ ಬೊಲ್ಲು ಕೊಟ್ಟದೆ ಅಂತಲೂ ಜನಪದರ ನಂಬಿಕೆ. ಚಂದ್ರನ ತಿಂಗಳ ಚಕ್ರ ಮತ್ತೆ ಹೆಣ್ಣ್ನ ಋತುಚಕ್ರಕ್ಕೂ ಸಮ್ಮಂದ ನೋಡಿ ಅವರ ಮಾನಸಿಕ ಕ್ರಿಯೆಗ ಚಂದ್ರನ ಕಿರಣಗ ಹಿಡಿದಿಟ್ಟವೆ ಅಂತ ನಂಬುವೆ. ಇದ್ರಂದಾಗಿಯೆ ಚಂದ್ರನ ಗರ್ಬ ರಕ್ಸಿಸ್ವ ದೇವತೆ ಅಂತಲೂ ಜನಪದ ಕತೆಗಳ್ಲಿ ಬಂದದೆ ಅಂತ ವಿದ್ವಾಂಸರ್ ಅಬಿಪ್ರಾಯಪಟ್ಟವೆ. ಅದ್ರೊಟ್ಟಿಗೆ ಚಂದ್ರಸೂರ್ಯರ್ ಇರ್ವಲಿವರೆಗೆ ಕುಸಿ ಕುಸಿಯಾಗಿದ್ದುಕವಾಗಿರೊಕುಂತಸಾ ನಂಬಿಕೆ ಉಟ್ಟು. ನಡುಲಿ ಬರಿವ ಕಳಸಲಿ ಕಾಯಿ, ಮಾವಿನ ಎಲೆ, ನೀರು ಮತ್ತೆ ಚೊಂಬು ಇದ್ದದೆ. ಇದ್ ಪ್ರಕೃತಿ ಮತ್ತೆ ಸಂಸ್ಕೃತಿನ ಒಂದ್ ಮಾಡ್ವಗುರ್ತ. ಬೂಮಿನ ಒಳ್ಗಿನ ಮತ್ತೆ ಬೂಮಿನ ಮೇಲ್ನ ಸಮ್ಮಂದ ಎದ್ದ್ ಕಂಡದೆ. ನೀರ್ ಗಂಡ್ ಹೆಣ್ಣ್ ಒಟ್ಟಿಗೆ ಸೇರ್ವ ಪಲವಂತಿಕೆ ಸೂಚಕ ಆದೆ. ಹಸೆಬರೆದ ಮೇಲೆ ಬರ್ದವಕ್ಕೆ ಅವಲಕ್ಕಿ, ಬಾಳೆಹಣ್ಣ್, ಬೆಲ್ಲ ಕೊಟ್ಟ್ಯೊರ್ಯೊದಿ ಕೊಡ್ವ ಕ್ರಮ ಉಟ್ಟು.

## ಹಸೆಮೊಂದ್ರಿ ಹಾಕುದು

ಹಸೆ ಬರ್ದ ನಂತರ ಕಾಲ್ದೀಪ ಹೊತ್ತಿ, ಅದರ ಎದ್ರ್ 5 ಜನ ಮುತ್ತೈದೆಯ್ರ್ ಸೋಬಾನೆ ಹೇಳಿಕಂಡ್ 5 ಕುಡ್ತೆ ಕೊಳ್ಗಿಲ್ ಅಕ್ಕಿನ 5 ಸಾಲ್ಮಾಡಿ ಹಾಕ್ತೆ. ಆಮೇಲೆ 5 ವೀಳ್ಯದೆಲೆ, 1 ಅಡಿಕೆನ ಒಂದೊಂದು ಬದಿಲಿ ಇಸಿವೆ. ಸೋಬಾನೆ ಹೇಳಿಕಂಡ್ ಅದರ ಮೇಲೆ ಹಸೆ ಮೊಂದ್ರಿ ಹಾಕಿ ಕುದ್ದವೆ. ಹೀಂಗೆ ಎದ್ದ್ಕಂಡ್ ಕುದ್ದ್ಕಂಡ್ ಸುಮಾರ್ ಮುಗುಳಿ ಆಂಕೆ ಬರುವಂಗೆ ನೋಡಿ ಕಂಡವೆ. ಇವ್ಕೆ ಮನೆನ ಮುತ್ತೈದೆವ್ ತಲೆಗೆ ಎಣ್ಣೆ ಕೊಟ್ಟ್ ಹಸೆಮೊಂದ್ರಿನ ಬುಟ್ಕೊಡುಕೊಂತ ಕೇಳಿಕಂಡವೆ. ಅವ್ಕೊಂದ್ರಿಂದ ಎದ್ರುವ ಮೊಗ್ಗಿ ಕಟ್ಟಿದ ಕಾಯಿನ ಮೊಂದ್ರಿಲಿ ಇಸಿ ಎದ್ರೊಕು. ಕೈಗೆ ಮೊದ್ರಂಗಿ ಇಸಿ ಆದ ಮೇಲೆ ಮದುಮಜ ಮದೊಳ್ಗೆಗೆ ಕುದ್ದಲ್ಲಿಗೆ ಪಾತ್ರೆಲಿ ನೀರ್ಕೊಟ್ಟ್ ಕೈ ತೊಳ್ದಾದ ಮೇಲೆ ಊರಗೌಡ ಒಕ್ಕಣೆಕೊದ್ರಿಸಿ ಹಸೆಮೊಂದ್ರಿಲಿ ಕುದ್ರಿಸುವೆ. ಈ ಕ್ರಮನ ಮುತ್ತೈದೆಯರೆ ಮಾಡೊಕು. ಮೊದುಮಕ್ಕ ಬೂಮಿನೂ ಮುಟ್ಟಿಕಾಗದ್ ಆಕಾಸನೂ ಮುಟ್ಟಿಕಾಗದ್ ಅಂತೇಳಿ ಅಕ್ಕಿ ಮೇಲೆ ಮೊಂದ್ರಿ ಹಾಸುವೆ. ಮೊದ್ಲೆ ಅವ ಕ್ರಮಕ್ಕೆ ಸುರುನ ಸಿದ್ದತೆ ಆಗಿ ಅವನ/ಅದರ ಮಾನಸಿಕವಾಗಿಸಿದ್ದ ಮಾಡ್ತ ಕ್ರಮ ಆಗುಟ್ಟು. ಮುತ್ತೈದೆಗಸಾ ಪವಿತ್ರ, ಸಕುನ ಅಂತೇಳಿ ಅವರೆ ಇಲ್ಲಿ ಮುಕ್ಯ ಎದ್ದು ಕುದ್ದು ಮಾಡುದು. ಇದ್ ಯಾರ್ದ್ಯಾರ ದೃಸ್ಟಿ ತಾಕುದು ಬೇಡ ಅತಾವ ಮುಂದೆ ಮೊದ್ವೆ ಆಂವಾವರೆಗೆ ಮೊಲ್ಗುವ ಜಾಗೆ ಮತ್ತೆ ಮೊಂದ್ರಿಲಿ ಬೇರೇನೂ ತೊಂದರೆ ಬಾಕೆ ಆಗದ್ಂತ ಕ್ರಮಗಳ ಮಾಡ್ತೆ. ಒಗ್ಗಿ ಹಾಕಿದ ಜೋಡಿಕಾಯಿಗ ಆಚೀಚೆ ಹೋಕನ ಇಸಿಹೋಕು. ಇದ್ ಮೊಂದ್ರಿನ ಕಾಲಿ ಬುಟ್ಟು ಹೋಕೆ ಬೊತ್ತುಂತ ನಂಬಿಕೆ ಆಗಿದ್ದವೆ. ಕಾಯಿ ಮೊಸ್ಸರ ಹಂಗೆ ಕಣ್ಣು, ಮೂಂಕು, ಬಾಯಿ, ಸರಂಬು ಇರುವ ರೂಪ ಆಗಿ ಈಸ್ವರ ದೇವರ ಪ್ರತೀಕ ಅಂತ ಅರೆಬಾಸೆ ಜೆನರ ನಂಬಿಕೆ ಆಗಿರ್ದರ್ಂದ ಮತ್ತೆ ಈ ಬಾಗಲಿ ಕಾಯಿ ಬೇಕಾದಸ್ಟ್ ಸಿಕ್ಕ್ತ ಕಾರಣ ವಿಸೇಸ ನಂಬಿಕೆನ ವಸ್ತು ಆವುಟ್ಟು.

ದಾರೆಗೆ ಹೋಕೆ ಮುಂದೆ ಹಸೆಗೋಡೆನ ಕೆಳಗೆ ಮೊದುಮಕ್ಕಳ ಕುದ್ರಿಸ್ತೆ. ಅಕ್ಕಿಲಿ ಹದ್ನಾಮೂರ್ಲೆಗೆ ಆರತಿನ ಚೌಕಾಕಾರವಾಗಿ ಬರ್ದು ಅದರ ಮೇಲೆ ಎಲೆ ಅಡ್ಕೆ, ಜಕ್ಕುಬಾಳೆ ಹಚ್ಚಿಸಿ ದೀಪ ಹೊತ್ತಿ, ಇವರ ಹಿಂದೆ ಬಲಿನ ಮೊಂದ್ರಿನ ಧೈವನ ಮನೆಲಿ ಹಾಕುವೆ. ಹಂಗೆನೆ ಗೂಡೆನ ಮನೆಲಿ

ಒಲಿಮೊಂದ್ರಿ ಹಾಸ್ವೆ. ಇದರ ಮೇಲೆ ಹೈದನ ಮನೆವ್ತಂದ ಹಸೆಸೀರೆನ ಹಾಸಿ ಗೂಡೆನ ಮನೆ ಉಡ್ಗಿರೆ ಆಗಿ ಕೊಡ್ವ ಒಲ್ಲಿನ ಹಾಸ್ವೆ.ಇದರ್ಲಿ ಮೊದುಮಕ್ಕಳ ಕುದ್ರಿಸ್ವೆ. ಇದರ ಹಸೆಲಿ ಕುದ್ರಿಸುದುಂತ ಹೇಳ್ವೆ. ಕೆಲವು ಕಡೆ ಒಂದಕ್ಕಿಂತ ಜಾಸ್ತಿ ಮೊಂದ್ರಿ ಹಾಸ್ವೆ. ಇದ್ ಅನುಕೂಲ ಮತ್ತೆ ಪ್ರಾದೇಸಿಕ ಆಗಿ ಬೇರೆ ಬೇರೆ ಆಗಿದ್ದದೆ.

### ಹಾಲುತುಪ್ಪ ಕುಡ್ಸ್ವ ಕ್ರಮ

ಮೊದ್ವೆ ಕ್ರಮ ಮುಗ್ದ್ ಹೈದನ ಮನೆಗೆ ಮೊದುಮಕ್ಕ ಬಂದಾಗ ಒಳೆಗೆ ಕರ್ಕಂಡ್ ಹಸೆ ಮೊಂದ್ರಿಲಿ ಊರ ಗೌಡ್ರ್ ಹತ್ತ್ ಕುಟ್ಂಬ ಹದಿನೆಂಟ್ ಗೋತ್ರಂತ ಗೋಸಡೆ ಹೇಳಿ ಕುದ್ರಿಸ್ವೆ. ಒಂದ್ಮಣೆ, ಒಂದ್ಚೊಂಬು ನೀರ್, ಒಂದ್ಕಾಲ್ದೀಪ ಇಸಿದ್, ಒಂದ್ಹರಿ ವಾಣಲಿ ಅಕ್ಕಿ, 5 ವೀಳ್ಯದೆಲೆ, 1 ಅಡ್ಕೆ. ಇನ್ನೊಂದು ಹರಿವಾಣಲಿ ಹಾಲ್ಹಾಕಿದ ಬಾಳೆ ಹಣ್ಣ್ಹಾಕಿಸೊಕು, ಕಾಲ್ದೀಪ ಹೊತ್ತಿರೊಕು, ಅಯ್ಯೆನೊಟ್ಟಿಗೆ 5 ಜನಮುತ್ತೈದ್ತೆಗ ಅಕ್ಕಿಸೇಸೆ ಹಾಕೊಕು. ಮತ್ತೆ ಹಾಲ್ತುಪ್ಪ ಶಾಸ್ತ್ರ ಮಾಡೊಕು. ಬಲಗೈ ಉಂಗುರ ಬೆರ್ಲ್ನ ಒಂದುಸರ್ತಿ ನೀರಿಗೆ ಮತ್ತೊಂದು ಸರ್ತಿ ಹಾಲ್ಗೆ ಮುಟ್ಟ್ಸಿ ಹೀಂಗೆ 5 ಸರ್ತಿ ಮಾಡೊಕು. ಮತ್ತೆ ಕುಡಿಯಕೆ ಹಾಲ್ಕೊಡೊಕು, ಹಾಲ್ಕುಡ್ನೋಟಕ್ಕೆ ಕೈಯಲ್ಲಿದ್ದ ಎಲೆ ಅಡ್ಕೆ ಎಲೆನ ಕೊಡಿ ಮೇಲಿರುವಂಗೆ ಹಾಕೊಕು. ಅದಾಗಿ ವೀಳ್ಯನ ತೆಗ್ದತ್ತೆ ಕೈಲಿ ಕೊಡೊಕು. ಅದಾಗಿ ಊರುಗೌಡ್ರ ಒಕ್ಕಣೆ ಹೇಳಿ ಮೊದ್ರಿಂದ ಎದ್ದುವೆ. ತುಪ್ಪದ ಕ್ರಮ ಮುಗ್ದತ್ತೆ ಹಸೆಮೊಂದ್ರಿ, ಸೇರ್ ಅಕ್ಕಿ, ಎಣ್ಣೆ – ಅರಿಸಿನಕೆ ಸಮ್ಮಂದ ಆವ ಸಾಮಾನ್ಗಳ ಮೊಡ್ಯಾಳತ ಕಂಡ್ಹೋದೆ.

ಮೊದ್ವೆಲಿ ಹಸೆ ಬರಿಯೊದ್ಮಲೆ ನಾಡ್ಲಿಸಾ ಉಟ್ಟು. ಸಂಪ್ರದಾಯಂದ ಬಂದತ ಒಂದು ಸಮುದಾಯನ ಕಲೆ ಸಂಸ್ಕೃತಿ ಅಂತ ಹೇಳಕ್. ಇಲ್ಲಿ ಅದಕ್ಕೆ ಕೆಂಪು ಮೊಣ್ಣ್ ಬಳ್ಸಿರೆ ಕೆಂಪು ಹಸೆಂತ, ಮೊಸಿನ ಬಳ್ಸಿರೆ ಕಪ್ಪು ಹಸೆಂತ ಹೇಳ್ವೆ. ಕಪ್ಪು ಹಸೆ ಬರಿವ ಕ್ರಮದವ್ಮದ್ವೆಲಿ ಮದುಮಜಂಗೆ ಪೇಟಾ ಕಟ್ಟಿ ಕೈಲಿ ಕಟಾರಿನ ಕೊಟ್ಟವೆ. ಅವು ದೀಪಾವಳಿಲಿ ಎತ್ತ್ಗಗ್ಗೆ ಬಾಸಿಂಗ ಕಟ್ಟುದ್ದೆ ಅಂತ ನಂಬಿಕೆ ಉಟ್ಟು.

### ಹಸೆ ನುಡಿಕಟ್ಟ್

1. ಹಸೆ ಏರ್ – ಅಂದರೆ ಮದುವೆಯಾಗ್
2. ಹಸೆ ಸೀರೆ – ಮೊಂದ್ರಿನ ಮೇಲೆ ಹಾಸುವ ಸೀರೆ

3. ಹಸೆ ಗೋಡೆ – ಹಸೆಚಿತ್ತಾರ ಬರಿಯುವ ಗೋಡೆ
4. ಹಸೆಮಣೆ – ಮೊದ್ಮಂಜ ಮತ್ತೆ ಮೊದ್ಮೋಳಿಗೆ ಕುದ್ರುವ ಮಣೆ
5. ಹಸೆಮೊಂದ್ರಿ – ಹಸೆ ಕುದ್ರಿಸಿಕಸ ಹಾಸ್ವ ಮೊಂದ್ರಿ

**ಗೋಡೆಲಿ ಹಸೆಬರಿಯಕನ ಸೋಬಾನೆ**

ಅಪ್ಪಾ–ಮಕ್ಕಳು ಕೂಡಿ । ತುಪ್ಪಾ ಬೋನವನುಂಡು ।
ಉಕ್ಕಿನುಳಿಬಾಜು ಹೆಗಲೇರಿ । ಹೊರಟಾರು ಒಳ್ಳೊಳ್ಳೆ
ಮರಕಡಿವಾ ಕೆಲಸಕ್ಕೆ । ಅಣ್ಣಾತಮ್ಮಂದಿರು ಕೂಡಿ ।
ಹಾಲು ಬೋನವನುಂಡು । ಚಿನ್ನಾದುಳಿಬಾಜು
ಹೆಗಲೇರಿ ಹೊರಟಾರು ಆಲದ ಕಡಿವಾ ಕೆಲಸಕ್ಕೆ ॥
ಆಲದ ಮಣೆಗೇಳಿ । ಆರೇಳು ದಿನವಾದೊ । ಆಲದ ಮಣೆ ಯಾಕೆ ಬರಲಿಲ್ಲಾ?
ಪಡಗಿನ ಮಣೆಯು ಊರಿಗೆ ಜಿಟ್ಟ ಹೋರಿನ ಹೊಡ–ಕೊಡೀ ॥
ಊರಿಗೆ ಜಿಟ್ಟ–ಹೋರಿನ ನಾವೇಗೆ ಹೊಡಕೊಡಲೊ?
ಜಾಮದಲೆದ್ದು ಕೆಲಸಕ್ಕೆ ಹೊರಟಾಗ। ಊರಿನ–ತುಂಬಾ ಬೆಳಕಾಯ್ತು!
ಹಲಸಿನ ಮಣೆಗೇಳಿ ಹತ್ತೆಂಟು ದಿನವಾದೋ ಹಲಸಿನ ಮಣೆ ಯಾಕೆ ಬರಲಿಲ್ಲಾ?
ಪಡಗಿನ ಮಣೆಯು ಊರಿಗೆ ಜಿಟ್ಟೆಮ್ಮನ ಹೊಡ–ಕೊಡೀ॥
ಊರಿಗೆ ಜಿಟ್ಟೆಮ್ಮನ ನಾವ್ಹೇಗೆ ಹೊಡಕೊಡಲೊ?
ಜಾಮದಲೆದ್ದು... ಮಲ್ಲಿಗೆ ಮುಡಿವಾಗ ಬೆಳಗಾದೊ॥
ಹಸೆಬರಿವಾ–ಜಗುಲಲ್ಲಿ । ಏನುಂಟು ಏನಿಲ್ಲಾ
...ಹಣ್ಣಡಿಕೆ ಸಿಪ್ಪೆ ಮೊದಲಿಲ್ಲಾ ಹಣ್ಣಡಿಕೆ ಸಿಪ್ಪೆಮೊದಲಿಲ್ಲದ ಕೋಣೆಯಲೀ।
ಹಸೆಬರಿವಾ ಕೋಣೆ ಬಲೂ–ಇಂಬು॥ ಹಸೆ ಬರವಾ ಜಗುಲಲ್ಲಿ ಏನುಂಟು ಏನಿಲ್ಲಾ
... ಯಾಲಕ್ಕಿ ಸಿಪ್ಪೆ ಮೊದಲಿಲ್ಲಾ। ಯಾಲಕ್ಕಿ ಸಿಪ್ಪೆಮೊದಲಿಲ್ಲದ ಕೋಣೆಯಲ್ಲೀ
ಹಸೆಬರಿವಾ ಜಗುಲಿ ಬಲೂ ಇಂಬು....॥
ಹಸೆಯಾ ಮೇಲೆರಡು ಕಳಸವಾ ತಂದಿಡಿರಿ ಮಗಳಿಗು
ಮಹಾದೇವಂಗು ಕುಂಡಲದಾ ಬಣ್ಣಾ ಬರೀರಣ್ಣಾ
ಹಸೆಯಾ ಬರಿಯಲಿಕೆ ಋಸಿಗಳು
ನಾವು ಬಂದೇವು ಚಂದಾಗಿ ಬರಿಯಿರಿ ಚೌಕವಾ॥
ಹಸೆಯಾ ಬರಿಯಲಿಕೆ ಇನ್ಯಾರು ಬರಬೇಕು?

ತಾಯಿಸೋದರದ ಪಿರಿಜಾವ ತಾಯಿಸೋದರದ ಪಿರಿಜಾವ ಬರಜೇಕೆಂದು
ಚಂದಾಗಿ ಬರಿಯಿರಿ ಚೌಕವಾ॥
ಸೂರ್ಯದೇವರ ಅಕ್ಕ ಬರುತ್ತಾಳೆಂದು ಚಂದಾಗಿ ಬರಿಯಿರಿ ಚೌಕವಾ॥
ಚಂದ್ರದೇವರ ತಂಗಿ ಬರುತ್ತಾಳೆಂದು ಚಂದಾಗಿ ಬರಿಯಿರಿ-ಚೌಕಾಗಿ॥
ಆ ಬಣ್ಣಾ..... ಬರಿರಣ್ಣಾ। ಈ ಬಣ್ಣಾ... ಬರಿರಣ್ಣಾ ಸೂರ್ಯದೇವರ
ಬಣ್ಣಾ...... ಬರೀರಣ್ಣಾ॥
ಆ ಬಣ್ಣಾ.... ಬರಿರಣ್ಣಾ.... ಈ ಬಣ್ಣಾ... ಬರಿರಣ್ಣಾ ಚಂದ್ರದೇವರ
ಬಣ್ಣಾ ಬರೀರಣ್ಣಾ॥
ಆ ಬಣ್ಣಾ ಬರೀರಣ್ಣಾ -ಈ ಬಣ್ಣಾ ಬರೀರಣ್ಣಾ ಗಿಳಿರಾಮನ
ಬಣ್ಣಾ ಬರಿರಣ್ಣಾ ॥
ಮಾವನವರ ಮನೇಲಿ ಬಾವ ಮಕ್ಕಳು ಹೆಚ್ಚು।
ಹಸೆ ನೋಡಿ-ನಿಮ್ಮ-ಜರದಾರು। ಹಸೆಬರಿದವರಿಗೆ ಏನೇನು ಉಂಬಳಿ?
ಸಣ್ಣಕ್ಕಿನಯಲುಸಮಾ ಉಂಬಳಿ....॥
ಹಸೆಬರಿದವರಿಗೆ ಏನೆಲ್ಲಾ ಉಡುಗೊರೆ?
ಸಾಲುಪಟ್ಟೆಗಳು ಸಮಾ-ಉಡೀಗೊರೆ.....॥
ಹಸೆಬರೆದವರಿಗೆ ಯಾವ್ಯಾವ ವೀಳ್ಯಗಳು
ತಟ್ಟೇಲಿ ವೀಳ್ಯವ ಮಡಗೀರಿ ॥

**ತಾತ್ವಿಕತೆ:**

ಮೇಲಿನ ಹಸೆಹಾಡ್ ಹಸೆಬರಿಯು ಕನ, ಮೊದುಮಂಜ, ಮೊದುಮೊಗ್ಗ ಕುದ್ರಿಸಿಕನ ಹಾಡ್ಡ್. ಮೊದುಮೊಗ್ಗ ಮನೆಲಿ ಮೊದುವೆ ಅವಾ ಸಮಯಲಿ ಹೇಳುವಂಗೆ ಉಟ್ಟು. ಇಲ್ಲಿ ಮೊದಲ ವಾಕ್ಯಂದಲೇ ಅಪ್ಪ ಮಕ್ಕಳ್ ಅಂತಸ್ತು ಇದೆ. ಇದ್ಮಕ್ಕಳ ಕಟ್ಟುನೆಲೆನ ಗುರ್ತಿಸಿದೆ. ಹಸೆಮಣೆ ಮಾಡಿಕೆ ಹಾಲ್ ಬರ್ವ ಮರ ಅತವಾ ಹಲ್ಲನ ಮರ ಪಲವಂತಿಕೆನ ರೂಪ ಆವುಟ್ಟು. ಹಾಲ್ ಬರ್ವ ಮರ ಅದ್ ಹಾಲೆಮರ, ಹಲ್ಲಮರ ಬಂದದೆ ಇದ್ ಅರೆಬಾಸೆ ಪ್ರದೇಸಲಿ ಪವಿತ್ರ. ಹಂಗೆನೆ ಜೇರೆ ಕ್ರಮಗ ಮಾಡಿಕನ ಬಳ್ಸುವ ಮರಗ ಆವುಟ್ಟು. ಹಸೆ ಹಾಡ್ಲಿ ಬರ್ವ ಅಡಿಕೆ, ಏಲಕ್ಕಿ ಅರೆಬಾಸೆ ಪ್ರದೇಸದ ಬೆಳೆವ ಬೆಳೆ ಆಗಿದ್ದದೆ. ಹಸೆ ಬರಿವವು ಯಾರ್? ಹಸೆಲಿ ಬರಿವ ಚಿತ್ರ, ಅದರ ಬಣ್ಣನ ವಿವರಣೆ, ಕೊಡುವ ಮೊರ್ಯಾದಿನ ವಿವರಗ ಬಂದದೆ.

ಜನಪದ ಕಲೆ ನಸಿಸಿ ಹೋಗ್ವಂತದ್ದಲ್ಲ. ಅದ್ಕಾಲಂದ ಕಾಲಕ್ಕೆ ಬದಲಾಗ್ತ ಹೊಸ ರೂಪ ತಾಳಿದೆ. ನಾಪಿಂದ್ಸಹಜ ಮತ್ತೆ ಕೃತಕಜೀವನಲಿ ಜನಪದನ ಬಳಸ್ತಾ ವಳೊ. ಹಿಂಗಾಗಿ ಆದುನಿಕತೆನ ಮುಂದೆ ಜನಪದ ಸಂಸ್ಕೃತಿ ಮುಚ್ಚಿ ಹೋಗ್ವಂಗೆ ಆಗ್ತ ಉಟ್ಟು. ಈಗೆಲ್ಲ ಮನೆಗೋಡೆ ಹಾಳಾದಂತ ಪ್ರಿಂಟ್ಮಾಡಿ ಹಸೆನ ಅಂಟುಸುವ ಕ್ರಮುಗ ಆಗ್ತಾ ಉಟ್ಟು. ಪದ್ಯ ಬರಿಯೊದ್, ಚಿತ್ರ ಬುಡ್ಸುದು, ಗಾದೆಮಾತ್, ಒಗಟ್ ಇದೆಲ್ಲ ಸಾಜವಾದ ಕಲೆಗಳಾದ ಈಗನ ಕಾಲಲಿ ಇದ್ವ್ಯಾಪಾರ ಆಗಿ ಸಿಕ್ಕಿಹಾಕಿ ಕಂಡ್ಯ್ಕತಕ ಆದೆನೊ !! ಹಿಂಗಾಗಿ ಜನಪದರ ಸರಳ, ಸಜ್ಜನಿಕೆ ಇರ್ವ ಮನಸ್ನ ಮಾತ್ರ ತಿಳ್ಕಂಡ್ಬೆಳ್ಸ್ಬ ಆದುನಿಕತೆನ ನೆಲೆಲಿ ಈ ಪಾರಂಪರಿಕ ಆಲೋಚನೆಗ ಅಳಿಸಿ ಹೋಕಾಗದ್.

**ಒದ್ದಪುಸ್ತಕಗ**


1. ಪುರುಷೋತ್ತಮ ಬಿಳಿಮಲೆ, 'ಸುಳ್ಯ ಪರಿಸರದ ಗೌಡ ಜನಾಂಗ-ಒಂದು ಸಾಂಸ್ಕೃತಿಕ ಅಧ್ಯಯನ', 1985. ಮಂಗಳೂರು ವಿಶ್ವವಿದ್ಯಾನಿಲಯ.
2. ಪಾಟೀಲ್ ಎಸ್. ಸಿ., 'ಕರ್ನಾಟಕದ ಚಿತ್ರಕಲೆ ಉತ್ತರಕರ್ನಾಟಕದವರನ್ನು ಅನುಲಕ್ಷಿಸಿ', 1990. ಧಾರವಾಡ: ಕರ್ನಾಟಕ ವಿಶ್ವವಿದ್ಯಾಲಯ .
3. ಶಿವಾನಂದ ಜಿ ಹೊಸಮನಿ, 'ಹಚ್ಚೆ ಒಂದು ಅಧ್ಯಯನ ಉತ್ತರ ಕರ್ನಾಟಕ ದವರನ್ನು ಅನುಲಕ್ಷಿಸಿ', 2007. ಧಾರವಾಡ: ಕರ್ನಾಟಕ ವಿಶ್ವವಿದ್ಯಾಲಯ.
4. ಜೈತಡ್ಕ ಜಾನಕಿ ಬೆಳ್ಯಪ್ಪ, 'ಅಕ್ಷಯ', 2009. ಮಡಿಕೇರಿ: ಕೊಡಗು ಗೌಡ ಮಹಿಳಾ ಒಕ್ಕೂಟ.
5. ಕೋರನಸರಸ್ವತಿ, 'ಕೊಡಗು ಗೌಡ ಸಮುದಾಯ ಸಾಂಸ್ಕೃತಿಕ ಅನನ್ಯತೆ' 2010. ಕೊಡಗು: ಕನ್ಯಾಪುರ ಪ್ರಕಾಶನ.
6. ಪುಟ್ಟಪ್ಪ ಮಾಸ್ತರ ಕುಗ್ವೆ, 'ಮಲೆನಾಡು: ದೀವರ ಸಾಂಸ್ಕೃತಿಕ ಸಂಕಥನ-ಜನಾಂಗೀಯ ಅಧ್ಯಯನ', 2016. ಬೆಂಗಳೂರು: ಕನ್ನಡ ಪುಸ್ತಕ ಪ್ರಾಧಿಕಾರ.


**ಮಾಹಿತಿ ಕೊಟ್ಟವು**

1. ಕುಶಾಲಪ್ಪ ಗೌಡ, 69 ವರ್ಸ, ಕಳುವಾಜೆಮನೆ, ಕಾಣಿಯೂರು, ಪುತ್ತೂರು ತಾಲೂಕು.
2. ಪುಕ್ರಪ್ಪ ಗೌಡ, 56 ವರ್ಸ, ನಡುಮನೆ, ಪೆರ್ಲಂಪಾಡಿ, ಪುತ್ತೂರು ತಾಲೂಕು

---

**ಭರತೇಶ ಅಲಸಂಡೆಮಜಲು**

# 2020ರ ಅಕ್ಟೋಬರ್‌ಂದ ಡಿಸಂಬರ್ ತಿಂಗ್ಳವರೆಗೆ ನಡ್ದಿದ ಕಾರ್ಯಕ್ರಮಗ

1. ಅಕ್ಟೋಬರ್ 4ರಂದ್. ಐತ್ವಾರ ಸಂಪಾಜೆನ ಸಹಕಾರ ಭವನಲಿ ಅರೆಬಾಸೆ ವಿಚಾರ ಸಂಕಿರಣ ನಡ್ದಿದೊ. ಕರ್ನಾಟಕ ಸಾಹಿತ್ಯ ಅಕಾಡೆಮಿನ ಅಧ್ಯಕ್ಷರ್. ಡಾ. ಬಿ.ವಿ. ವಸಂತಕುಮಾರ್‌ನವು "ಭಾಷಾ ಅಕಾಡೆಮಿನ ಚಟುವಟಿಕೆಗಳ ಸ್ವರೂಪ ಮತ್ತೆ ಸಾಧ್ಯತೆಗ" ಅಂತೇಳುವ ವಿಷಯದ ಮೇಲೆ ಉಪನ್ಯಾಸ ಕೊಟ್ಟೊ. ಹಾಂಗೇ ಮಡಿಕೇರಿ ತಾಲ್ಲೂಕು ಪಂಚಾಯತ್ ಸದಸ್ಯರಾದ ಶ್ರೀ ನಾಗೇಶ ಕುಂದಲ್ಪಾಡಿಯವು 'ಭಾಷೆ ಮತ್ತೆ ಸಂಸ್ಕೃತಿನ ಉಳ್ಸುವಲ್ಲಿ ಸಮುದಾಯದ ಪಾತ್ರ' ಅಂತೇಳುವ ವಿಷಯದ ಮೇಲೆ ಉಪನ್ಯಾಸ ನೀಡ್ದೊ. ಈ ವಿಚಾರ ಸಂಕಿರಣನ ಶ್ರೀ ಎನ್.ಎಸ್. ದೇವಿಪ್ರಸಾದ್. ಮಾಜಿ ಅಧ್ಯಕ್ಷರ್. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿ ಇವು ಉದ್ಘಾಟಿಸಿದೊ.

2. 'ಅಮರ ಸುಳ್ಯ ಸ್ವಾತಂತ್ರ್ಯ ಹೋರಾಟಗಾರರ ನೆನ್ಪು' ಅಂತೇಳುವ ಅಂತರಜಾಲಲಿ ಉಪನ್ಯಾಸ ಕಾರ್ಯಕ್ರಮ ನಡ್ದಿದೊ. ಅಕ್ಟೋಬರ್ 26ರಂದ್ 'ಅಮರ ಸುಳ್ಯ ಸ್ವಾತಂತ್ರ್ಯರ ಹೋರಾಟದ ಹಿನ್ನಲೆ ಬಗ್ಗೆ' ಡಾ ಮಾಧವ ಪೆರಾಜೆ. ಪ್ರಾಧ್ಯಾಪಕರ್. ದ್ರಾವಿಡ ಸಂಸ್ಕೃತಿ ಅಧ್ಯಯನ ವಿಭಾಗ. ಕನ್ನಡ ವಿಶ್ವವಿದ್ಯಾನಿಲಯ ಇವು ಉಪನ್ಯಾಸ ನೀಡ್ದೊ. ಅಕ್ಟೋಬರ್ 27ರಂದ್ 'ಕೆದಂಬಾಡಿ ರಾಮಗೌಡ-ವ್ಯಕ್ತಿ ಚಿತ್ರಣ'ದ ಬಗ್ಗೆ ಡಾ.ಪ್ರಭಾಕರ ಶಿಶಿಲ. ವಿಶ್ರಾಂತ ಪ್ರಾಂಶುಪಾಲರ್. ನೆಹರೂ ಸ್ಮಾರಕ ಪದವಿ ಕಾಲೇಜ್. ಸುಳ್ಯ ಇವು ಉಪನ್ಯಾಸ ಕೊಟ್ಟೊ. ಅಕ್ಟೋಬರ್ 28ರಂದ್ 'ಗುಡ್ಡೆಮನೆ ಅಪ್ಪಯ್ಯ ಗೌಡ- ವ್ಯಕ್ತಿ ಚಿತ್ರಣ'ದ ಬಗ್ಗೆ ಡಾ. ಕುಶ್ವಂತ್ ಕೋಳಿಬೈಲ್. ಮಕ್ಕಳ ತಜ್ಞರ್. ಜಿಲ್ಲಾ ಆಸ್ಪತ್ರೆ. ಮಡಿಕೇರಿ ಇವು ಉಪನ್ಯಾಸ ಕೊಟ್ಟೊ. ಅಕ್ಟೋಬರ್ 29ರಂದ್ 'ಅಮರ ಸುಳ್ಯ ಸ್ವಾತಂತ್ರ್ಯ ಹೋರಾಟದ ನಂತರದ ದಿನಗ' ಅಂತೇಳುವ ವಿಚಾರದ ಮೇಲೆ ಅನಿಂದಿತ್ ಗೌಡ, ಕೊಚ್ಚಿಬಾರಿಕೆ ಇವು ಉಪನ್ಯಾಸ ನೀಡ್ದೊ.

3. ಅಕ್ಟೋಬರ್ 31ರಂದ್ ಶನಿವಾರ ಕೊಡಗು ಜಿಲ್ಲಾಡಳಿತ. ಕನ್ನಡ ಮತ್ತೆ ಸಂಸ್ಕೃತಿ ಇಲಾಖೆ ಹಾಂಗೇ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿ ಜೊತೆ ಸೇರಿ ಸ್ವಾತಂತ್ರ್ಯ ಹೋರಾಟಗಾರ ಸುಬೇದಾರ್ ಗುಡ್ಡೆಮನೆ ಅಪ್ಪಯ್ಯ ಗೌಡರ ಹುತಾತ್ಮ ದಿನಾಚರಣೆನ ಮಡಿಕೇರಿನ ಸುದರ್ಶನ ವೃತ್ತದ ಹತ್ರ ಇರುವ ಅಪ್ಪಯ್ಯಗೌಡರ ಸ್ಮಾರಕದ  ಜಾಗಲಿ ನಡ್ಸಿದೊ. ಮತ್ತೆ ಕೋಟೆ ಒಳಗೆ ಅವರನ್ನ ನೇಣಿಗೆ ಹಾಕಿದ ಜಾಗಲಿ ಪುಷ್ಪ ನಮನ ಮಾಡ್ದೊ.

4. ಅಕ್ಟೋಬರ್ 31ರ ಶನಿವಾರ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿ. ಸುಳ್ಯ ನಗರ ಅರೆಭಾಷಿಗರ ಸಮಿತಿನ ಕೂಡ್‌ಕೂಟಲಿ ಸುಳ್ಯನ ಎ.ಪಿ.ಎಂ.ಸಿ ಬಾಡೆಲಿ ಅಮರ ಸುಳ್ಯ ಸ್ವಾತಂತ್ರ್ಯ ಹೋರಾಟಗಾರರ ನೆನ್ಪು ಮಾಡುವ ಜಂಭರನ ನಡ್ಸಿದೊ. ಸುಳ್ಯ ವಿಧಾನ ಸಭಾ ಕ್ಷೇತ್ರದ ಶಾಸಕರ್ ಶ್ರೀ ಎಸ್. ಅಂಗಾರನವು ಮುಖ್ಯ ನೆಂಟ್ರಾಗಿ ಬಂದಿದೊ. ವಿಶೇಷ ಆಹ್ವಾನಿತರಾಗಿ ಶ್ರೀ ವಿನಯ ಮುಳುಗಾಡು. ಅಧ್ಯಕ್ಷರ್.

ಎ.ಪಿ.ಎಂ.ಸಿ ಸುಳ್ಯ, ಶ್ರೀ ಧನಂಜಯ ಅಡ್ಪಂಗಾಯ, ಅಧ್ಯಕ್ಷರ್, ದಕ್ಷಿಣ ಕನ್ನಡ ಗೌಡ ವಿದ್ಯಾ ಸಂಘ(ರಿ), ಸುಳ್ಯ ಮತ್ತ್ ಶ್ರೀ ಮೋಹನ್ ರಾಂ ಸುಳ್ಳಿ, ಅಧ್ಯಕ್ಷರ್, ಗೌಡರ ಯುವ ಸೇವಾ ಸಂಘ(ರಿ), ಸುಳ್ಯ ಇವು ಬಂದಿದೊ. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತ್ ಸಾಹಿತ್ಯ ಅಕಾಡೆಮಿನ ಸದಸ್ಯರ್, ಪ್ರಾಧ್ಯಾಪಕರ್ ಆದ ಡಾ. ವಿಶ್ವನಾಥ ಬದಿಕಾನವು ಮುಖ್ಯ ಮಾತಗಾರರಾಗಿದ್ದೊ.

5. ನವಂಬರ್ 28 ಮತ್ತ್ 29ರಂದ್ ಅರೆಬಸೆ ನಿಘಂಟು ತರಬೇತಿ ಕಾರ‍್ಯಗಾರ ಮಡಿಕೇರಿ ಗೌಡ ಸಮಾಜಲಿ ನಡ್ತ್. ಮುಖ್ಯ ನೆಂಟ್ರಾಗಿ ಶ್ರೀ ನಾಗೇಶ್ ಕಾಲೂರು ಇವು ಬಂದಿದೊ. ಮತ್ತ್ ಡಾ. ಕರುಣಾಕರ ನಿಡುಂಜಿ ಇವು ಉಪನ್ಯಾಸ ನಿಡ್ದೊ.

6. ಡಿಸಂಬರ್ 4ರಂದ 6ರ ವರೆಗೆ ರಂಗಮನೆ ಸಾಂಸ್ಕೃತಿಕ ಕಲಾ ಕೇಂದ್ರ ಸುಳ್ಯಲಿ ಸಾಹೇಬ್ರು ಬಂದವೆ ಅರೆಬಾಸೆ ನಾಟಕ ಪ್ರದರ್ಶನ ಆತ್.

7. ಅರೆಬಾಸೆ ದಿನಾಚರಣೆನ ಅಂಗವಾಗಿ ಡಿಸಂಬರ್ 11ರ್ಂದ 14ರ ವರೆಗೆ ಆನ್‌ಲೈನ್ ಸರಣಿ ಉಪನ್ಯಾಸನ ಆಯೋಜಿಸಿದೊ. 11ರಂದ್ ಪ್ರೊ ಕೋಡಿ ಕುಶಾಲಪ್ಪ ಗೌಡ ಇವು 'ಅರೆಬಾಸೆ-ಧ್ವನಿಯ ವ್ಯವಸ್ಥೆ' ಅಂತೇಳುವ ವಿಷಯದ ಮೇಲೆ ಉಪನ್ಯಾಸ ಮಾಡ್ದೊ. 12ರಂದ್ ಪ್ರೊ. ಪುರುಷೋತ್ತಮ ಬಿಳಿಮಲೆ ಇವು 'ಅರೆಬಾಸೆನ ಉಳ್ಸುವ ಸಾಧ್ಯತೆಗ' ಅಂತೇಳ್ವ ವಿಷಯದ ಮೇಲೆ ಉಪನ್ಯಾಸ ಕೊಟ್ಟೊ. 13ರಂದ್ ಡಾ ಕೋರನ ಸರಸ್ವತಿಯವು 'ಅರೆಬಾಸೆನ ಸಂಶೋದನೆ ಸಾಧ್ಯತೆಗ' ಅಂತೇಳ್ವ ವಿಷಯದ ಮೇಲೆ ಉಪನ್ಯಾಸ ಮಾಡ್ದೊ. 14ರಂದ್ ಡಾ ಲಾವಣ್ಯ ಸಿ.ಪಿ.ಕೊಟ್ಟುಕೇರಿಯಾನ ಇವು 'ಅರೆಬಾಸೆನ ಬಳ್ಸುವ ಸಾಧ್ಯತೆಗ' ಅಂತೇಳ್ವ ವಿಷಯದ ಮೇಲೆ ಉಪನ್ಯಾಸ ಮಾಡ್ದ್ಯೊಳೊ.

8. ಡಿಸಂಬರ್ 15ರಂದ್ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತ್ ಸಾಹಿತ್ಯ ಅಕಾಡೆಮಿ ಅರೆಬಾಸೆ ದಿನಾಚರಣೆ ಮತ್ತ್ ಪಂಚವಟಿ ಅರೆಬಾಸೆ ಯಕ್ಷಗಾನ ತಾಳಮದ್ದಳೆ ಜಂಭರನ ಭಾರತೀಯ ವಿದ್ಯಾಭವನ, ಮಡಿಕೇರಿಲಿ ನಡ್ಸಿದೊ. ಅರೆಬಾಸೆ ದಿನಾಚರಣೆ ಜಂಬರನ ಶ್ರೀ ಬಾರಿಯಂಡ ಜೋಯಪ್ಪ, ವಿಶ್ರಾಂತ ಪ್ರಾಂಶುಪಾಲರ್ ಉದ್ಘಾಟಿಸಿದೊ. ನೆಂಟ್ರಾಗಿ ಶ್ರೀ ಸೂರ್ತಲೆ ಸೋಮಣ್ಣ, ಅಧ್ಯಕ್ಷರ್, ಗೌಡ ಸಮಾಜಗಳ ಒಕ್ಕೂಟ(ರಿ), ಮಡಿಕೇರಿ, ಶ್ರೀ ಪೈಕೇರ ಮನೋಹರ ಮಾದಪ್ಪ, ಅಧ್ಯಕ್ಷರ್, ಕೊಡಗು ಗೌಡ ಯುವ ವೇದಿಕೆ(ರಿ) ಮತ್ತ್ ಶ್ರೀಮತಿ ಬಿಯಂಡಿ ರಾಧ ಯಾದವ, ಕೊಡಗು ಗೌಡ ಮಹಿಳಾ ಒಕ್ಕೂಟ(ರಿ) ಇವು ಭಾಗವಹಿಸಿದೊ.

9. ಡಿಸಂಬರ್ 15ರಂದ್ ಭಾಗಮಂಡಲ ನಾಡು ಗೌಡ ಯುವ ಒಕ್ಕೂಟ(ರಿ) ಮತ್ತ್ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತ್ ಸಾಹಿತ್ಯ ಅಕಾಡೆಮಿ ಕೂಡ್‌ಕೂಟಲಿ ಭಾಗಮಂಡಲ ಗೌಡ ಸಮಾಜಲಿ ಅರೆಭಾಷೆ ದಿನಾಚರಣೆನ ಆಚರಿಸಿದೊ. ಕಾರ್ಯಕ್ರಮದ ಅಧ್ಯಕತೆನ ಭಾಗಮಂಡಲ ನಾಡು ಗೌಡ ಯುವ ಒಕ್ಕೂಟ (ರಿ)ದ ಅಧ್ಯಕ್ಷರಾದ ಕುದುಕುಳಿ ಕಿಶೋರ್‌ನವು ವಹಿದೊ.

10. ಡಿಸಂಬರ್ 15ರಂದ್ ಕುಶಾಲನಗರ ಗೌಡ ಸಮಾಜ ಮತ್ತ್ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತ್ ಸಾಹಿತ್ಯ ಅಕಾಡೆಮಿ ಕೂಡ್‌ಕೂಟಲಿ ಕುಶಾಲನಗರ ಗೌಡ

ಸಮಾಜಲಿ ಅರೆಭಾಷೆ ದಿನಾಚರಣೆನ ಆಚರಿಸಿದೊ. ಡಾ. ದಯಾನಂದ ಕೂಡಕಂಡಿ, ಸದಸ್ಯರ್, ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿ ಮತ್ತೆ ಪ್ರಾಧ್ಯಾಪಕರ್ ಇವು ಮುಖ್ಯ ಮಾತಗಾರರಾಗಿ ಬಂದಿದೊ. ಮುಖ್ಯ ನೆಂಟ್ರಾಗಿ ಸಂಶೋಧಕ ಶ್ರೀ ಅನಂತರಾಜ್ ಗೌಡ ಪುತ್ತೂರು ಮತ್ತೆ ಡಾ.ಕುಶ್ವಂತ್ ಕೋಳಿಬೈಲ್ ಇವು ಬಂದಿದೊ.

11. ಡಿಸಂಬರ್ 15ರಂದ್ ಮಂಗಳವಾರ ರೋಟರಿ ಹಿರಿಯ ಪ್ರಾಥಮಿಕ ಶಾಲಾ ವಠಾರ, ರಥಬೀದಿ ಸುಳ್ಯಲಿ ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿ ಅರೆಭಾಷೆ ದಿನಾಚರಣೆ ಮತ್ತೆ 'ಕಂಸವಧೆ' ಅಂತೇಳುವ ಅರೆಭಾಷೆ ಯಕ್ಷಗಾನ ಪ್ರದರ್ಶನನ ಮಾಡ್ದೊ. ಈ ಜಂಬರನ ಶ್ರೀ ಮೋಹನ್ ರಾಂ ಸುಳ್ಳಿ, ಅಧ್ಯಕ್ಷರ್, ಗೌಡರ ಯುವ ಸೇವಾ ಸಂಘ(ರಿ), ಸುಳ್ಯ ಇವು ಉದ್ಘಾಟಿಸಿದೊ. ಶ್ರೀಮತಿ ಸ್ವರ್ಣ ಕಿಶೋರ್ ತಳೂರು, ಉಪನ್ಯಾಸಕರ್, ಶ್ರೀ ಶಾರದ ಮಹಿಳಾ ಪದವಿ ಪೂರ್ವ ಕಾಲೇಜು, ಸುಳ್ಯ ಇವು ಮುಖ್ಯ ಮಾತ್‌ಗಾರರಾಗಿ ಮಾತಾಡ್ದೊ. ಶ್ರೀ ಜೀತೇಂದ್ರ ಎನ್.ಸಿ, ಸಂಚಾಲಕರ್, ರೋಟರಿ ವಿದ್ಯಾಸಂಘ, ಸುಳ್ಯ ಇವು ನೆಂಟ್ರಾಗಿದ್ದೊ.

12. ಡಿಸಂಬರ್ 15ರಂದ್ ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ (ರಿ.) ಬೆಂಗಳೂರು ಮತ್ತೆ ಅರೆಬಾಸೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿನ ಕೂಡುಕೂಟಲಿ ಅರೆಭಾಷೆ ದಿನಾಚರಣೆನ ಆಚರಿಸಿದೊ. ಜಂಬರನ ಕೊಡಗು ಮತ್ತೆ ದಕ್ಷಿಣ ಕನ್ನಡ ಗೌಡ ಸಮಾಜದ ಅಧ್ಯಕ್ಷರ್ ಆದ ತೇನನ ರಾಜೇಶ್‌ನವು ಉದ್ಘಾಟಿಸಿದೊ. ಯು.ಎಸ್.ಎ.ನ ಕ್ಯಾಲಿಫೋರ್ನಿಯೊದಲ್ಲಿರ್‌ವ ಮದುವೆಗದ್ದೆ ಓಂಪ್ರಕಾಶನವು ಹೇಂಗೆ ಅರೆಬಾಸೆನ ಉಳ್ಸುದುಂತೇಳುವ ಬಗ್ಗೆ ಮಾತಾಡ್ದೊ.

13. ಡಿಸಂಬರ್ 15ರಂದ್ ಮಂಗಳೂರ್‌ನ ರವೀಂದ್ರನಾಥ ಠ್ಯಾಗೋರ್ ಪಾರ್ಕ್‌ಲಿ ಒಕ್ಕಲಿಗ ಗೌಡ ಸೇವಾ ಸಂಘ, ಒಕ್ಕಲಿಗ ಗೌಡ ಯುವ ಸೇವಾ ಸಂಘ, ಮಹಿಳಾ ಘಟಕ ಮತ್ತೆ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿನ ಕೂಡುಕೂಟಲಿ ಅರೆಬಾಸೆ ದಿನಾಚರಣೆನ ಆಚರಿಸಿದೊ. ದಕ್ಷಿಣ ಕನ್ನಡ ಜಿಲ್ಲಾಧಿಕಾರಿ ಶ್ರೀ ರಾಜೇಂದ್ರನವು ಜಂಬರನ ಉದ್ಘಾಟಿಸಿದೊ. ಅಕಾಡೆಮಿನ ಅಧ್ಯಕ್ಷರಾದ ಶ್ರೀ ಲಕ್ಷ್ಮೀನಾರಾಯಣ ಕಜೆಗದ್ದೆವು ಅಧ್ಯಕ್ಷತೆನ ವಹಿಸಿದೊ. ಕಾರ್ಯಕ್ರಮಲಿ ಒಕ್ಕಲಿಗ ಗೌಡ ಸೇವಾ ಸಂಘ, ಯುವ ಸೇವಾ ಸಂಘ ಮತ್ತೆ ಮಹಿಳಾ ಘಟಕದ ಪದಾಧಿಕಾರಿಗ ಬಾಗವಹಿಸಿದೊ. ಅಕಾಡೆಮಿನ ಸದಸ್ಯರಾದ ಡಾ. ವಿಶ್ವನಾಥ ಬದಿಕಾನವು ಉಪಸ್ತಿತರಿದ್ದೊ.

14. ಡಿಸಂಬರ್ 15ರಂದ್ ಆಲೂರು ಸಿದ್ದಾಪುರ ಅರೆಬಾಸೆ ಗೌಡ ಸಮಾಜ ಮತ್ತೆ ಕರ್ನಾಟಕ ಅರೆಬಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿನ ಕೂಡುಕಟ್ಟ್‌ಲಿ ಅರೆಬಾಷೆ ದಿನಾಚರಣೆನ ಆಚರಿಸಿದೊ. ಕಾರ್ಯಕ್ರಮದ ಅಧ್ಯಕ್ಷತೆನ ಆಲೂರು ಸಿದ್ದಾಪುರ ಅರೆಬಾಷೆ ಗೌಡ ಸಮಾಜದ ಅಧ್ಯಕ್ಷರ್ ಆದ ಶ್ರೀ ದೇವಾಯಿರ ಗಿರೀಶ್ ವಹಿಸಿದೊ. ಜಂಬರಲಿ ಉಪಾಧ್ಯಕ್ಷರ್ ಆದ ಶ್ರೀ ಜಿಟ್ಟಿನ ಈರಪ್ಪ, ಕಾರ್ಯದರ್ಶಿ ಶ್ರೀ ಕುಯ್ಯಮುಡಿ ಜಯಕುಮಾರ್ ಮೊದಲಾದವು ಇದ್ದೊ.

# ಕರ್ನಾಟಕ ಅರೆಭಾಷೆ ಮತ್ತು ಸಾಹಿತ್ಯ ಅಕಾಡೆಮಿ

## ಅಧ್ಯಕ್ಷರು ಮತ್ತು ಸದಸ್ಯರ ವಿಳಾಸ

**ಅಧ್ಯಕ್ಷರು**

**ಶ್ರೀ ಲಕ್ಷ್ಮೀ ನಾರಾಯಣ ಕಜೆಗದ್ದೆ**
ಕನಕಮಜಲು ಅಂಚೆ,
ಸುಳ್ಯ ತಾಲೂಕು, ದ.ಕ 574223
ಮೊ.ನಂ 9449082249,
kajegadde@gmail.com

**ಸದಸ್ಯರು**

**ಶ್ರೀಮತಿ ಜಾನಕಿ ಬೈತಡ್ಕ**
#21-16. ರೇಸ್‌ಕೋರ್ಸ್ ರಸ್ತೆ,
ಎಲ್ಐಸಿ ಹತ್ತಿರ, ಮಡಿಕೇರಿ, ಕೊಡಗು.
ಮೊ ನಂ 9008571899

**ಶ್ರೀಮತಿ ಸ್ಮಿತಾ ಅಮೃತರಾಜ್**
'ಹಸಿರು'
ಬಾಲೆಂಬಿ ಅಂಚೆ, ಚೆಂಬು ಗ್ರಾಮ
ಮಡಿಕೇರಿ ತಾಲೂಕು
ಮೊ ನಂ 9980402968

**ಶ್ರೀಮತಿ ಚೊಕ್ಕಾಡಿ ಪ್ರೇಮ ರಾಘವಯ್ಯ**
ಟಿ.ಜಾನ್ ಲೇಔಟ್.
ಶಕ್ತಿ ಕ್ವಾಟ್ರಸ್
ಮಡಿಕೇರಿ
ಮೊ.ನಂ 9900992360

**ಶ್ರೀ ಎ.ಪಿ. ಧನಂಜಯ ಅಗೋಳಿಕಜೆ**
2ನೇ ಮೊಣ್ಣಂಗೇರಿ ಗ್ರಾಮ
ಮದೆ ಅಂಚೆ,
ಮಡಿಕೇರಿ ತಾಲೂಕು
ಮೊ ನಂ 9449731238

**ಶ್ರೀ ಆನಂದ ದಂಬೆಕೋಡಿ**
ಮೇಘಸಂದ್ಯ ಎಸ್ಟೇಟ್,
ಕತ್ತಲೆಕಾಡು ಗ್ರಾಮ,
ಕಡಗದಾಳು ಅಂಚೆ
ಮಡಿಕೇರಿ ತಾಲೂಕು
ಮೊ.ನಂ. : 9448141502

**ಡಾ. ದಯಾನಂದ ಕೂಡಕಂಡಿ**
ಬಿನ್. ಚಂದ್ರಹಾಸ ಕೆ.ಟಿ.
ತಾವೂರು ಗ್ರಾಮ, ಭಾಗಮಂಡಲ
ಮಡಿಕೇರಿ ತಾಲೂಕು
ಮೊ. ನಂ. : 9449766772
dayanandakudakandi@gmail.com

**ಶ್ರೀ ಕುಸುಮಾಧರ ಎ.ಟಿ.**
ಬಿನ್. ತ್ಯಾಂಪಣ್ಣಗೌಡ
ಅಕ್ಕೆ ಮಜಲು ಮನೆ
ಕಾಯರ್ತೋಡಿ, ಸುಳ್ಯ
ಮೊ. ನಂ. : 7090133686

**ಡಾ. ವಿಶ್ವನಾಥ ಬದಿಕಾನ**
ಬಿನ್. ಹೂವಪ್ಪಗೌಡ ಬದಿಕಾನ
ನಂ. 9-88/9,
ಪ್ಲಾಟ್ ನಂ.. 407(34)
ಧ್ರುವ ರೆಸಿಡೆನ್ಸಿ, ಎಕ್ಕೂರು,
ಕಂಕನಾಡಿ -575002,
ಮಂಗಳೂರು, ದಕ್ಷಿಣ ಕನ್ನಡ
ಮೊ. ನಂ. : 9449615474

**ಶ್ರೀ ಜಯಪ್ರಕಾಶ್ ಮೋಂಟಡ್ಕ**
ಕೌಸ್ತುಭ ನಿಲಯ, ಬಿಳಿನೆಲೆ ಗ್ರಾಮ
ನೆಟ್ಟಣ ಅಂಚೆ, ಕಡಬ ತಾಲೂಕು
ದಕ್ಷಿಣ ಕನ್ನಡ–574 230
ಮೊ. ನಂ. : 9480293464

**ಶ್ರೀ ಪುರುಷೋತ್ತಮ ಕಿರ್ಲಾಯ**
ಬಿನ್. ದೇವಣ್ಣ ಗೌಡ ಕೆ.
ಕಿರ್ಲಾಯ ಮನೆ
ಅರಂತೋಡು ಗ್ರಾಮ ಮತ್ತು ಅಂಚೆ
ಸುಳ್ಯ ತಾಲೂಕು, ದಕ್ಷಿಣ ಕನ್ನಡ
ಮೊ. ನಂ. : 9449770439

**ಡಾ. ಪುರುಷೋತ್ತಮ ಕೆ.ವಿ. ಕರಂಗಲ್ಲು**
'ಚಾಣಕ್ಯ'
ಸರಕಾರಿ ಪ್ರಥಮ ದರ್ಜೆ ಕಾಲೇಜು
ಮುಂಭಾಗ, ಗಾಂಧಿನಗರ,
ಕಾವೂರು,
ಮಂಗಳೂರು, ದ.ಕ–575015.
ಮೊಬೈಲ್ : 9448216070

**ಶ್ರೀ ಭರತೇಶ ಅಲಸಂಡೆಮಜಲು**
ಅಲಸಂಡೆಮಜಲು ಮನೆ
ಕೊಳ್ತಿಗೆ ಗ್ರಾಮ,
ಪುತ್ತೂರು ತಾಲೂಕು
ದಕ್ಷಿಣ ಕನ್ನಡ–574 212,
ಮೊ. ನಂ. : 9008027271

**ಶ್ರೀ ಕಿರಣ್ ಕುಂಬಳಚೇರಿ**
ಬಿನ್. ಕೇಶವ ಕೆ.ಎ. ಕುಂಬಳಚೇರಿ
ಮನೆಪೆರಾಜೆ ಗ್ರಾಮ ಮತ್ತು ಅಂಚೆ
ಮಡಿಕೇರಿ ತಾಲೂಕು,
ಕೊಡಗು ಜಿಲ್ಲೆ
ಮೊ. ನಂ. : 9164069225

ರಿಜಿಸ್ಟ್ರಾರ್
**ಶ್ರೀ ಚಿನ್ನಸ್ವಾಮಿ**
ಸಹಾಯಕ ನಿರ್ದೇಶಕರು
ವಾರ್ತಾ ಇಲಾಖೆ, ವಾರ್ತಾ ಭವನ
ಕೊಡಗು ಜಿಲ್ಲೆ, ಮಡಿಕೇರಿ
ಮೊ: 9945045327

ಅರ್ಥ ಸದಸ್ಯರು
**ಶ್ರೀಮತಿ ಕೆ.ಟಿ. ದರ್ಶನ**
ಸಹಾಯಕ ನಿರ್ದೇಶಕರು
ಕನ್ನಡ ಮತ್ತು ಸಂಸ್ಕೃತಿ ಇಲಾಖೆ
ಕೊಡಗು ಜಿಲ್ಲೆ, ಮಡಿಕೇರಿ
ಮೊ: 9483110593

## ಅಕಾಡೆಮಿದ್ ಪ್ರಕಟಣೆಗ

1 ಸರ್ಮಾಲೆ : ಎಂ.ಜಿ. ಕಾವೇರಮ್ಮ
2 ಅಜ್ಜಪ್ಪನ ಕತಾ ಭಂಡಾರಂದ ಹೆರ್ಕಿದ ಕತೆಗ : ಎಂ.ಜಿ. ಕಾವೇರಮ್ಮ
3 ಬೇರ್‌ಲಿ ಚಿಗ್‌ರ್ : ಬೈತಡ್ಕ ಜಾನಕಿ ಬೆಳ್ಯಪ್ಪ
4 ಕಂಕುಮ : ಪೂಜಾರೀರ ಜಿ. ಮಾದಪ್ಪ
5 ಬೊಲ್ಪಾಕನ ಮುಗ್ತ್ : ವಿದ್ವಾನ್ ಟಿ.ಜಿ. ಮುಡೂರು
6 ಬೇಟೆನ ಬಿರ್ಸ- ಬಡ್ಡಡ್ಕ ಅಪ್ಪಯ್ಯ ಗೌಡ್ರು : ವೇದಾವತಿ ಅನಂತ ಬಡ್ಡಡ್ಕ
7 ಬೆಳ್ಳಿಮುಷ್ಟಿ : ಕಟ್ರತನ ಕೆ. ಬೆಳ್ಯಪ್ಪ
8 ತೋರಣ : ಬಾರಿಯಂಡ ಆರ್. ಜೋಯಪ್ಪ
9 ಬೊಲ್ಪು : ಲೋಕೇಶ್ ಕುಂಚಡ್ಕ
10 ಮತ್ತೆ ಸಿಕ್ಕಿತ್ ಕುಂಕುಮ : ಕಟ್ರತನ ಲಲಿತ ಅಯ್ಯಣ್ಣ
11 ನೆಂಪುಗಳ ರಂಗೋಲಿ : ಎಂ.ಜಿ. ಕಾವೇರಮ್ಮ
12 ಹೊಸ ಬೊದ್ಕ್ : ಉದಯಕುಮಾರಿ ಚೆಂಬು
13 ಸಂಸ್ಕೃತಿ ಸಂಪತ್ತ್ : ಅರೆಭಾಷೆ ಸಂಸ್ಕೃತಿ ಪರಿಚಯ
14 ಬೆಳ್ಳಿ ಚುಕ್ಕೆಗ : ಬೈತಡ್ಕ ಜಾನಕಿ ಬೆಳ್ಯಪ್ಪ
15 ಅನುಭವ ಧಾರೆ : ಹೊದ್ದೆಟ್ಟಿ ಭವಾನಿಶಂಕರ
16 ರುಚಿ : ಅರೆಭಾಷೆ ಸಂಪ್ರದಾಯದ ಅಡಿಗೆ.
17 ಸಫಲ : ಅರೆಭಾಷೆ ಅಕಾಡೆಮಿಯ 2ನೇ ಸಮಿತಿಯ 3 ವರ್ಷಗಳ ಸಾಧನೆ.
18 ಬದುಕು : ಎಂ.ಜಿ. ಕಾವೇರಮ್ಮ
19 ನೆಂಪುನ ಜೊಂಪೆ : ವಿನೋದ್ ಮೂಡಗದ್ದೆ
20 ಕಾಡ್‌ನ ಮಕ್ಕ : ಕೆ.ಆರ್. ತೇಜಕುಮಾರ್
21 ಅಪ್ಪ ಹೇಳ್ದ ಹತ್ತ್ ಕತೆಗ : ಭವಾನಿ ಶಂಕರ್ ಅಡ್ತಲೆ
22 ನೆಗೆ ಬೇಕ್ ಕೇದಗೆ ಗೊನೆ ಹಾಂಗೆ : ಡಾ॥ ಕರುಣಾಕರ ನಿಡಂಜಿ
23 ತಬ್ಲಿ ಮಂಜ : ಪಿ.ಜಿ. ಅಂಬೆಕಲ್
24 ಮಿಂಪುಳಿ : ಡಾ॥ ಪುನೀತ್ ರಾಘವೇಂದ್ರ ಕುಂಟುಕಾಡು
25 ಅರೆಬಾಸೆ ವ್ಯಾಕರಣ : ಪ್ರೊ. ಕೆ. ಕುಶಾಲಪ್ಪ ಗೌಡ
26 ಅಪೂರ್ವ ಸಂಗಮ : ಕಟ್ರತನ ಲಲಿತಾ ಅಯ್ಯಣ್ಣ
27 ಪುಂಸ್ತ್ರೀ (ಅರೆಭಾಷೆಗೆ ತರ್ಜುಮೆ) : ಎಂ.ಜಿ. ಕಾವೇರಮ್ಮ
28 ಕಲ್ಯಾಣಸ್ವಾಮಿ (ಅರೆಭಾಷೆಗೆ ತರ್ಜುಮೆ) : ಸಂಗೀತ ರವಿರಾಜ್




ಸುಳ್ಯಲಿ ನಡ್ದ ಅರೆಬಾಸೆ ದಿನಾಚರಣೆನ ಉದ್ಘಾಟನೆ



ಬೆಂಗಳೂರುಲಿ ನಡ್ದ ಅರೆಬಾಸೆ ದಿನಾಚರಣೆನ ಉದ್ಘಾಟನೆ




ಭಾಗಮಂಡಲಲಿ ನಡ್ದ ಅರೆಬಾಸೆ ದಿನಾಚರಣೆನ ಉದ್ಘಾಟನೆ

HINGARA
Date : 31-12-2020 Kodagu

Arebhashe Quarterly
KARARB/2016/69571

Volume-4, Issue-5
Price : Rs. 20/- Pages : 80




ಸಂಪಾಜೆನ ಸಹಕಾರ ಭವನಲಿ ನಡ್ದ ಅರೆಬಾಸೆ ವಿಚಾರ ಸಂಕಿರಣದ ಉದ್ಘಾಟನೆ



ಮಡಿಕೇರಿಲಿ ಸುಬೇದಾರ್ ಗುಡ್ಡೆಮನೆ ಅಪ್ಪಯ್ಯ ಗೌಡರ ಹುತಾತ್ಮ ದಿನಾಚರಣೆ




ಸುಳ್ಯಲಿ ನಡ್ದ ಅಮರಸುಳ್ಯ ಸ್ವಾತಂತ್ರ್ಯ ಹೋರಾಟಗಾರರ ನೆನ್ಪು ಮಾಡುವ ಜಂಭರಲಿ ಮಾನ್ಯ ಸಚಿವರಾದ ಶ್ರೀ ಎಸ್ .ಅಂಗಾರನವು ಮಾತನಾಡ್ದು.